# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 100 (99)

ಸದಸ್ಯರ ಹೆಸರು : ಶ್ರೀ ಜಿ. ರಘು ಆಚಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 21.09.2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣ ಇಲಾಖೆಯಡಿ ಬರುವ ಗ್ರಂಥಾಲಯಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಅಂಕಿ ಅಂಶ ಒದಗಿಸುವುದು) ಅವುಗಳಿಗೆ ಸಮರ್ಪಕವಾಗಿ ಪುಸ್ತಕಗಳನ್ನು ಒದಗಿಸಲಾಗುತ್ತಿದೆಯೇ; (ಮಾಹಿತಿ ಒದಗಿಸುವುದು) | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ಹಿಸುತ್ತಿರುವ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಅಧೀನದಲ್ಲಿ ದಿನಾಂಕ: 31-03-2020 ರ ಅಂತ್ಯಕ್ಕೆ ಒಟ್ಟು 1075 ಗ್ರಂಥಾಲಯಗಳು ಕಾರ್ಯ ನಿರ್ವಹಿಸುತ್ತಿವೆ.<br><br>5766 ಗ್ರಾಮ ಪಂಚಾಯಿತಿ ಗ್ರಂಥಾಲಯಗಳನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 64 ಎಲ್ಐಬಿ 2015, ದಿನಾಂಕ:26.02.2019 ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ವರ್ಗಾಯಿಸಲಾಗಿದ್ದು, ಸದರಿ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿವೆ (ಅನುಬಂಧ-1)<br><br>ಸದರಿ ಗ್ರಂಥಾಲಯಗಳಿಗೆ ಸಮರ್ಪಕವಾಗಿ ಪುಸ್ತಕಗಳನ್ನು ಒದಗಿಸಲಾಗುತ್ತಿದೆ. |
| (ಆ) | ಕಳೆದ 3 ವರ್ಷಗಳಲ್ಲಿ ಶಿಕ್ಷಣ ಇಲಾಖೆಯ ಗ್ರಂಥಾಲಯಗಳಿಗೆ ಪುಸ್ತಕ ಖರೀದಿ ಮಾಡಲು ಬಳಸಲಾದ ಅನುದಾನ ಎಷ್ಟು; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕಳೆದ 3 ವರ್ಷಗಳಲ್ಲಿ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ನಗರ ಕೇಂದ್ರ ಗ್ರಂಥಾಲಯಗಳಿಗೆ ರೂ.52.82 ಕೋಟಿ ಹಾಗೂ ಜಿಲ್ಲಾ ಕೇಂದ್ರ ಗ್ರಂಥಾಲಯಗಳಿಗೆ ರೂ.81.77 ಕೋಟಿ ಅನುದಾನವನ್ನು ಒಟ್ಟಾರೆಯಾಗಿ ರೂ. 134.59 ಕೋಟಿಗಳನ್ನು ಪುಸ್ತಕ ಖರೀದಿ ಮಾಡಲು ಬಳಸಲಾಗಿದೆ.<br><br>ರಾಜ್ಯದ ಜಿಲ್ಲಾ ಹಾಗೂ ನಗರ ಗ್ರಂಥಾಲಯವಾರು ಮಾಹಿತಿಯನ್ನು ಅನುಬಂಧ-2 ಮತ್ತು ಅನುಬಂಧ-3 ರಲ್ಲಿ ಲಗತ್ತಿಸಿದೆ. |
| (ಇ) | ಪ್ರಾಥಮಿಕ ಶಿಕ್ಷಣ ಇಲಾಖೆಯಡಿ ಬರುವ ಗ್ರಂಥಾಲಯಗಳಿಗೆ 2020-2021ನೇ ಸಾಲಿಗೆ ಪುಸ್ತಕ ಖರೀದಿಸಲು ಮೀಸಲಿಡಲಾದ ಅನುದಾನ ಎಷ್ಟು; (ಮಾಹಿತಿ ಒದಗಿಸುವುದು) | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರಂಥಾಲಯಗಳಿಗೆ 2020-21ನೇ ಸಾಲಿನ ಆಯವ್ಯಯದಲ್ಲಿ ಪುಸ್ತಕ ಖರೀದಿಸಲು ಏಕಗವಾಕ್ಷಿ ಮತ್ತು ಎಸ್‌ಸಿಪಿ/ಟಿಎಸ್‌ಪಿ ಯೋಜನೆಗಳಡಿಯಲ್ಲಿ ರೂ.7.08 ಕೋಟಿಗಳನ್ನು ನಿಗದಿಪಡಿಸಲಾಗಿದ್ದು, ಮಾಹಿತಿಯನ್ನು ಅನುಬಂಧ-4 ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಇಡಿ 30 ಎಲ್ಐಬಿ 2020**

(ಎಸ್. ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

30

<u>ಅನುಬಂಧ-1</u>

## ರಾಜ್ಯದಲ್ಲಿನ ಸಾರ್ವಜನಿಕ ಗ್ರಂಥಾಲಯ ಇಲಾಖೆಯಡಿ ಕಾರ್ಯ ನಿರ್ವಹಿಸುತ್ತಿರುವ ಒಟ್ಟು ಗ್ರಂಥಾಲಯಗಳ ವಿವರ (31-03-2020ರ ಅಂತ್ಯಕ್ಕೆ)

| ಕ್ರ. ಸಂ. | ಜಿಲ್ಲಾ/ನಗರಕೇಂದ್ರಗ್ರಂಥಾಲಯ ಹೆಸರು | ನಗರಕೇಂದ್ರಗ್ರಂಥಾಲಯ | ಜಿಲ್ಲಾಕೇಂದ್ರಗ್ರಂಥಾಲಯ | ಶಾಖಾ ಗ್ರಂಥಾಲಯ | ಸೇವಾ ಕೇಂದ್ರ ಗ್ರಂಥಾಲಯ | ಸಂಚಾರಿ ಗ್ರಂಥಾಲಯ | ವಾಚನಾಲಯ | ಸಮುದಾಯ ಮಕ್ಕಳ ಗ್ರಂಥಾಲಯ | ಗ್ರಾ.ಪಂ. ಗ್ರಂಥಾಲಯ | ಅಲೆಮಾರಿ ಗ್ರಂಥಾಲಯ | ಕೊಳಚೆ ಪ್ರದೇಶಗ್ರಂಥಾಲಯ | ಒಟ್ಟು |
|---|---|---|---|---|---|---|---|---|---|---|---|---|
| 1. | ರಾಜ್ಯಕೇಂದ್ರಗ್ರಂಥಾಲಯ | 1 | 0 | 0 | 0 | 0 | 0 | 1 | 0 | 0 | 0 | 2 |
| 2. | ಬೆಂಗಳೂರು ನಗರ | 5 | 1 | 100 | 31 | 2 | 27 | 1 | 128 | 2 | 1 | 298 |
| 3. | ಬೆಂಗಳೂರು ಗ್ರಾಮಾಂತರ | 0 | 1 | 5 | 0 | 0 | 0 | 1 | 98 | 2 | 0 | 107 |
| 4. | ರಾಮನಗರ | 0 | 1 | 4 | 3 | 0 | 0 | 1 | 131 | 2 | 4 | 146 |
| 5. | ಕೋಲಾರ | 1 | 1 | 8 | 2 | 0 | 1 | 1 | 159 | 10 | 4 | 187 |
| 6. | ಚಿಕ್ಕಬಳ್ಳಾಪುರ | 0 | 1 | 6 | 2 | 0 | 2 | 1 | 151 | 2 | 4 | 169 |
| 7. | ತುಮಕೂರು | 1 | 1 | 19 | 4 | 1 | 4 | 1 | 330 | 1 | 3 | 365 |
| 8. | ಚಿತ್ರದುರ್ಗ | 1 | 1 | 12 | 0 | 0 | 2 | 1 | 198 | 4 | 4 | 223 |
| 9. | ಶಿವಮೊಗ್ಗ | 2 | 1 | 24 | 1 | 0 | 11 | 1 | 261 | 3 | 0 | 304 |
| 10. | ದಾವಣಗೆರೆ | 1 | 1 | 15 | 5 | 1 | 9 | 1 | 246 | 5 | 4 | 288 |
| 11. | ಮೈಸೂರು | 1 | 1 | 26 | 15 | 1 | 7 | 1 | 236 | 3 | 3 | 296 |
| 12. | ಮಂಡ್ಯ | 1 | 1 | 12 | 0 | 0 | 7 | 1 | 236 | 2 | 4 | 264 |
| 13. | ಹಾಸನ | 1 | 1 | 14 | 0 | 0 | 2 | 1 | 260 | 1 | 4 | 284 |
| 14. | ಚಿಕ್ಕಮಗಳೂರು | 1 | 1 | 10 | 2 | 1 | 1 | 1 | 226 | 4 | 4 | 251 |
| 15. | ಮಡಿಕೇರಿ | 0 | 1 | 5 | 0 | 0 | 0 | 1 | 98 | 1 | 0 | 106 |
| 16. | ಮಂಗಳೂರು | 1 | 1 | 25 | 1 | 1 | 0 | 1 | 206 | 2 | 4 | 242 |
| 17. | ಉಡುಪಿ | 1 | 1 | 11 | 2 | 0 | 1 | 1 | 147 | 2 | 0 | 166 |
| 18. | ಚಾಮರಾಜನಗರ | 0 | 1 | 3 | 0 | 0 | 2 | 1 | 122 | 1 | 4 | 134 |
| 19. | ಬೆಳಗಾಂ | 1 | 1 | 20 | 21 | 1 | 0 | 1 | 488 | 6 | 4 | 543 |
| 20. | ಧಾರವಾಡ | 1 | 1 | 26 | 27 | 1 | 2 | 2 | 127 | 4 | 4 | 195 |
| 21. | ಕಾರವಾರ | 0 | 1 | 11 | 0 | 1 | 0 | 1 | 218 | 2 | 0 | 236 |
| 22. | ವಿಜಯಪುರ | 1 | 1 | 21 | 4 | 1 | 0 | 1 | 197 | 4 | 5 | 235 |
| 23. | ಹಾವೇರಿ | 0 | 1 | 10 | 2 | 0 | 0 | 1 | 211 | 4 | 12 | 241 |
| 24. | ಗದಗ | 1 | 1 | 18 | 2 | 0 | 0 | 1 | 107 | 1 | 4 | 135 |
| 25. | ಬಾಗಲಕೋಟೆ | 0 | 1 | 18 | 3 | 0 | 1 | 1 | 163 | 6 | 4 | 197 |
| 26. | ಕಲಬುರಗಿ | 1 | 1 | 24 | 0 | 0 | 0 | 1 | 223 | 9 | 4 | 263 |
| 27. | ಬಳ್ಳಾರಿ | 2 | 1 | 22 | 15 | 1 | 0 | 1 | 197 | 7 | 4 | 249 |
| 28. | ಬೀದರ್ | 1 | 1 | 19 | 0 | 0 | 0 | 1 | 180 | 5 | 4 | 211 |
| 29. | ರಾಯಚೂರು | 1 | 1 | 16 | 3 | 0 | 4 | 1 | 166 | 16 | 4 | 212 |
| 30. | ಕೊಪ್ಪಳ | 0 | 1 | 7 | 0 | 0 | 0 | 1 | 135 | 3 | 4 | 151 |
| 31. | ಯಾದಗಿರಿ | 0 | 1 | 8 | 0 | 0 | 0 | 1 | 120 | 11 | 0 | 141 |
| | ಒಟ್ಟು | **27** | **30** | **519** | **145** | **12** | **83** | **32** | **5766** | **127** | **100** | **6841** |

ನಿರ್ದೇಶಕರು
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಬೆಂಗಳೂರು.

ಅನುಬಂಧ-2

ಕಳೆದ ಮೂರು ವರ್ಷಗಳಲ್ಲಿ ಶಿಕ್ಷಣ ಇಲಾಖೆಯ ಅಧೀನದ ಸಾರ್ವಜನಿಕ ಗ್ರಂಥಾಲಯಗಳಿಗೆ

ಪುಸ್ತಕ ಖರೀದಿ ಮಾಡಲು ಬಳಸಲಾದ ಅನುದಾನ

| ಕ್ರ.ಸಂ. | ನಗರ ಕೇಂದ್ರ ಗ್ರಂಥಾಲಯಗಳ ಹೆಸರು | 2017-18 | 2018-19 | 2019-20 | ಒಟ್ಟು |
|---|---|---|---|---|---|
| 1. | ರಾ.ಕೇ.ಗ್ರಂ ಬೆಂ | 3973068 | 80584 | 58179 | 4111831 |
| 2. | ದಕ್ಷಿಣ ವಲಯ ಬೆಂ | 6859185 | 19964760 | 51728823 | 78552768 |
| 3. | ಕೇಂದ್ರ ವಲಯ ಬೆಂ | 10543703 | 20710545 | 4474 | 31258722 |
| 4. | ಉತ್ತರ ವಲಯ ಬೆಂ | 5357537 | 17325028 | 34248002 | 56930567 |
| 5. | ಪೂರ್ವ ವಲಯ ಬೆಂ | 37304658 | 23758214 | 44779402 | 105842274 |
| 6. | ಪಶ್ಚಿಮ ವಲಯ ಬೆಂ | 5188538 | 16863545 | 40776545 | 62828628 |
| 7. | ಕೆ.ಜಿ.ಎಫ್. | 208000 | 319897 | 207063 | 734960 |
| 8. | ತುಮಕೂರು | 2610000 | 3100000 | 970000 | 6680000 |
| 9. | ಶಿವಮೊಗ್ಗ | 1152128 | 4063226 | 3376057 | 8591411 |
| 10. | ಭದ್ರಾವತಿ | 873184 | 957786 | 1088644 | 2919614 |
| 11. | ದಾವಣಗೆರೆ | 2722000 | 3759000 | 3376000 | 9857000 |
| 12. | ಚಿತ್ರದುರ್ಗ | 1329595 | 1719669 | 1627277 | 4676541 |
| 13. | ಮೈಸೂರು | 6506417 | 6778945 | 8745497 | 22030859 |
| 14. | ಹಾಸನ | 227050 | 2481447 | 3694057 | 6402554 |
| 15. | ಮಂಗಳೂರು | 8326739 | 13430805 | 15804789 | 37562333 |
| 16. | ಉಡುಪಿ | 1598346 | 2296063 | 2613222 | 6507631 |
| 17. | ಮಂಡ್ಯ | 415000 | 287000 | 633000 | 1335000 |
| 18. | ಚಿಕ್ಕಮಗಳೂರು | 972927 | 1591946 | 3135876 | 5700749 |
| 19. | ಬೆಳಗಾವಿ | 4323909 | 5449757 | 7080620 | 16854286 |
| 20. | ವಿಜಯಪುರ | 161512 | 2413234 | 3743058 | 6317804 |
| 21. | ಧಾರವಾಡ | 3588277 | 6584701 | 0 | 10172978 |
| 22. | ಗದಗ | 880613 | 474282 | 1614406 | 2969301 |
| 23. | ಕಲಬುರಗಿ | 4180437 | 4894915 | 5266106 | 14341458 |
| 24. | ಬಳ್ಳಾರಿ | 2644460 | 3603072 | 4285252 | 10532784 |
| 25. | ಹೊಸಪೇಟೆ | 713795 | 1359792 | 1363119 | 3436706 |
| 26. | ರಾಯಚೂರು | 3221734 | 3285352 | 1369772 | 7876858 |
| 27. | ಬೀದರ್ | 906290 | 1096817 | 1231233 | 3234340 |
| | ಒಟ್ಟು | 116789102 | 168650382 | 242820473 | 528259957 |

ನಿರ್ದೇಶಕರು
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಬೆಂಗಳೂರು

ಎಸ್*LALC 100(99)

ಅನುಬಂಧ-3

## ಕಳೆದ ಮೂರು ವರ್ಷಗಳಲ್ಲಿ ಶಿಕ್ಷಣ ಇಲಾಖೆಯ ಅಧೀನದ ಸಾರ್ವಜನಿಕ ಗ್ರಂಥಾಲಯಗಳಿಗೆ ಪುಸ್ತಕ ಖರೀದಿ ಮಾಡಲು ಬಳಸಲಾದ ಅನುದಾನ

| ಕ್ರ. ಸಂ. | ಜಿಲ್ಲಾ ಕೇಂದ್ರ ಗ್ರಂಥಾಲಯಗಳ ಹೆಸರು | 2017-18 | 2018-19 | 2019-20 | ಒಟ್ಟು ಮೊತ್ತ |
|---|---|---|---|---|---|
| 1. | ನಿರ್ದೇಶಕರ ಕಛೇರಿ | 234795000 | 204854251 | 123039496 | 562688747 |
| 2. | ಬೆಂಗಳೂರು (ನ) | 5155360 | 10941595 | 12878448 | 28975403 |
| 3. | ಬೆಂಗಳೂರು(ಗ್ರಾ) | 3324374 | 3457057 | 527747 | 7309178 |
| 4. | ಕೋಲಾರ | 724483 | 332484 | 1191946 | 2248913 |
| 5. | ತುಮಕೂರು | 2510015 | 4489495 | 5125617 | 12125127 |
| 6. | ಚಿತ್ರದುರ್ಗ | 1504862 | 1642787 | 1893465 | 5041114 |
| 7. | ಶಿವಮೊಗ್ಗ | 924491 | 1744193 | 1674051 | 4342735 |
| 8. | ದಾವಣಗೆರೆ | 282257 | 1325745 | 996644 | 2604646 |
| 9. | ಮೈಸೂರು | 2339320 | 3265201 | 4056061 | 9660582 |
| 10. | ಮಂಡ್ಯ | 308624 | 204705 | 134072 | 647401 |
| 11. | ಹಾಸನ | 1258306 | 2534297 | 3682896 | 7475499 |
| 12. | ಚಿಕ್ಕಮಗಳೂರು | 1302846 | 1830420 | 1664686 | 4797952 |
| 13. | ಮಡಿಕೇರಿ | 410445 | 329369 | 624511 | 1364325 |
| 14. | ಮಂಗಳೂರು (ದ.ಕ) | 12459765 | 8552399 | 21698520 | 42710684 |
| 15. | ಉಡುಪಿ | 3217186 | 3960734 | 4193333 | 11371253 |
| 16. | ಚಾಮರಾಜನಗರ | 286000 | 349000 | 557000 | 1192000 |
| 17. | ಬೆಳಗಾವಿ | 4399788 | 5140747 | 2993320 | 12533855 |
| 18. | ಧಾರವಾಡ | 281638 | 1321863 | 1253954 | 2857455 |
| 19. | ಕಾರವಾರ | 2127807 | 6420028 | 5840188 | 14388023 |
| 20. | ವಿಜಯಪುರ | 31170 | 1748761 | 1338511 | 3118442 |
| 21. | ಹಾವೇರಿ | 1910157 | 3232570 | 1820236 | 6962963 |
| 22. | ಗದಗ | 69960 | 395111 | 921477 | 1386548 |
| 23. | ಬಾಗಲಕೋಟೆ | 2000000 | 1492000 | 5484453 | 8976453 |
| 24. | ಕಲಬುರಗಿ | 693312 | 0 | 0 | 693312 |
| 25. | ಬಳ್ಳಾರಿ | 1813071 | 399349 | 2357373 | 4569793 |
| 26. | ಬೀದರ್ | 10601 | 36315 | 1369704 | 1416620 |
| 27. | ರಾಯಚೂರು | 1924791 | 5007636 | 6590366 | 13522793 |
| 28. | ಕೊಪ್ಪಳ | 730308 | 823528 | 963656 | 2517492 |
| 29. | ರಾಮನಗರ | 3750453 | 6228740 | 6263689 | 16242882 |
| 30. | ಚಿಕ್ಕಬಳ್ಳಾಪುರ | 3054549 | 8195974 | 4930109 | 16180632 |
| 31. | ಯಾದಗಿರಿ | 4577153 | 1720470 | 1491924 | 7789547 |
| | ಒಟ್ಟು | 298178092 | 291976824 | 227557453 | 817712369 |

ನಿರ್ದೇಶಕರು
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಬೆಂಗಳೂರು.

ಎಸ್*LALC 100(99)



(26)

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2020-21ನೇ ಸಾಲಿಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ರಾಜ್ಯ ವಲಯ ಯೋಜನೆಗಳಡಿ ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ:-
1. ಸರ್ಕಾರದ ಆದೇಶ ಸಂಖ್ಯೆ ಪಿಡಿ 14 ಐಎಂಎಂ 2017 ದಿ:23.3.2017.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಇ 15 ಬಿಪಿಇ 2019, ದಿ:01.04.2020.
3. ಸರ್ಕಾರದ ಆದೇಶ ಸಂಖ್ಯೆ: ಆಇ 02 ಟಿ.ಎಫ್.ಪಿ 2020, ದಿ:30.05.2020.
4. ಸರ್ಕಾರದ ಆದೇಶ ಸಂಖ್ಯೆ: ಇಪಿ 82 ಯೋಯೋಕ 2019, ದಿ:02.04.2020, 29.04.2020, 02.06.2020 ಮತ್ತು 12.06.2020.
5. ಸರ್ಕಾರದ ಆದೇಶ ಸಂಖ್ಯೆ: ಇಪಿ 84 ಯೋಯೋಕ 2019. ದಿ:05.06.2020.
6. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಯೋ1.ರಾ.ವ.ಯೋ.ಕಾ.07/2019-20. ದಿ:08.06.2020.
7. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂಶಿ/ಲೆಪ-3/ಆಯವ್ಯಯ/ಯೋಜನೆ/2020-21. ದಿ:29.04.2020.
8. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಾಗ್ರಂಇ/ನಿಕ/ಯೋವಿ/ಕ್ರಿಯೋ/01/2020-21. ದಿ:23.04.2020.
9. ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಡಿಪಿಎಸ್/ಲೆಕ್ಕಪತ್ರ-1/2020-21/28, ದಿ:12.06.2020.

*****

ಪ್ರಸ್ತಾವನೆ

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರದ ಆದೇಶದಲ್ಲಿ ವಿವಿಧ ಇಲಾಖೆಗಳು ಮುಂದುವರಿಕಾ ಕಾರ್ಯಕ್ರಮಗಳು ಹಾಗೂ ಆಯವ್ಯಯ ಘೋಷಿತ ಹೊಸ ಯೋಜನಾ ಕಾರ್ಯಕ್ರಮಗಳಿಗೆ ಮುಂಜೂರಾತಿ ನೀಡುವ ವಿಧಾನ ಮತ್ತು ಪ್ರಕ್ರಿಯೆಯನ್ನು ನಿರ್ದಿಷ್ಟಪಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2) ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ಕಾಲಕಾಲಕ್ಕೆ ಜಾರಿಯಲ್ಲಿರುವ ಮಿತವ್ಯಯದ ಸೂಚನೆಗಳನ್ನು ಮತ್ತು ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ವಿಧಾನ ಮಂಡಲವು ಅನುಮೋದಿಸಿರುವ ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕದನ್ವಯ 2020-21ನೇ ಸಾಲಿನ ವಿವಿಧ ಯೋಜನೆ/ಕಾರ್ಯಕ್ರಮಗಳಿಗೆ ದಿನಾಂಕ: 1ನೇ ಏಪ್ರಿಲ್ 2020 ರಿಂದ ದಿನಾಂಕ: ಮಾರ್ಚ್ 2021 ರವರೆಗಿನ ಅವಧಿಯ ವೆಚ್ಚವನ್ನು ಭರಿಸಲು ಇಲಾಖಾ ಮುಖ್ಯಸ್ಥರು ಮತ್ತು ಅಂದಾಜು ಅಧಿಕಾರಿಗಳಿಗೆ ಅಧಿಕಾರ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3) ರ ಸರ್ಕಾರದ ಆದೇಶದಲ್ಲಿ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ವಿವಿಧ ಯೋಜನೆ/ಕಾರ್ಯಕ್ರಮಗಳಿಗೆ ಜೂನ್-2020 ರಿಂದ ನವೆಂಬರ್-2020ರವರೆಗೆ

ಅನುದಾನ ಬಿಡುಗಡೆ ಮಾಡಲು ಆಡಳಿತ ಇಲಾಖೆಗಳ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (4) ಮತ್ತು (5) ರ ಸರ್ಕಾರದ ಆದೇಶದಲ್ಲಿ, 2020-21ನೇ ಸಾಲಿನ ಮುಂದುವರಿದ ಯೋಜನೆ/ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಮೊದಲನೇ ತ್ರೈಮಾಸಿಕ ಅನುದಾನ ಬಿಡುಗಡೆ ಮಾಡಲಾಗಿದ್ದು, ಅಗತ್ಯ ಯೋಜನೆಗಳಿಗೆ ಸೂಕ್ತ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿ, ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವಂತೆ ಸೂಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (6) ರಿಂದ (9) ರ ಇಲಾಖಾ ಮುಖ್ಯಸ್ಥರ ಪತ್ರಗಳಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ರಾಜ್ಯವಲಯದ ಲೆಕ್ಕ ಶೀರ್ಷಿಕೆಗಳಡಿ ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಿರುವ ಅನುದಾನದಲ್ಲಿ ವಿವಿಧ ಕಾರ್ಯಕ್ರಮ/ಯೋಜನೆಗಳನ್ನು ಅನುಷ್ಠಾನಗೊಳಿಸಲು ಕ್ರಿಯಾ ಯೋಜನೆಗಳನ್ನು ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

## ಸರ್ಕಾರದ ಆದೇಶ ಸಂಖ್ಯೆ: ಇಡಿ 84 ಯೋಯೋಕ 2020, ಬೆಂಗಳೂರು, ದಿನಾಂಕ:18-06-2020

2020-21ನೇ ಸಾಲಿಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ರಾಜ್ಯವಲಯದ ಆಯವ್ಯಯದಲ್ಲಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಒದಗಿಸಿರುವ ಅನುದಾನದಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ವಿವಿಧ ಯೋಜನೆ/ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

**ಷರತ್ತುಗಳು:**

- 2019-20ನೇ ಸಾಲಿನಲ್ಲಿ ಮುಂದುವರೆಸಲಾಗಿದ್ದ ಹಾಗೂ ಹೊಸದಾಗಿ ಮಂಜೂರು ಮಾಡಲಾದ ಕಾರ್ಯಕ್ರಮಗಳನ್ನು ಮಾತ್ರ ಈ ಆದೇಶದಂತೆ 2020-21ನೇ ಸಾಲಿಗೆ ಮುಂದುವರೆಸಿ ಅನುಷ್ಠಾನಗೊಳಿಸತಕ್ಕದ್ದು.
- ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮೇಲುರುಜುವಿನೊಂದಿಗೆ ಅನುದಾನ ಸೆಳೆಯುವ ಲೆಕ್ಕಶೀರ್ಷಿಕೆಗಳಿಗೆ ಸಂಬಂಧಿಸಿದಂತೆ ಅನುದಾನವನ್ನು ಖಜಾನೆಯಲ್ಲಿ ಅಪ್ಲೋಡ್ ಮಾಡಲು ಹಾಗೂ ಸಂಬಂಧಿಸಿದ ಇಲಾಖಾ ಮುಖ್ಯಸ್ಥರು ಸ್ವೀಕರ್ತನ ರಸೀದಿ (ಸಿ.ಟಿ.ಎಸ್.-8) ರಡಿ ಸೆಳೆಯಲು ಅನುಕೂಲವಾಗುವಂತೆ ಅವರು ಸಲ್ಲಿಸುವ ಬಿಲ್ಲುಗಳಿಗೆ ಮೇಲುಸಹಿ ಮಾಡುವ ಅಧಿಕಾರವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.
- ಸದರಿ ಕಾರ್ಯಕ್ರಮಗಳಿಗೆ ತ್ರೈಮಾಸಿಕವಾರು ಬಿಡುಗಡೆ ಮಾಡಲಾದ/ಮಾಡಲಾಗುವ ಅನುದಾನವನ್ನು ನಿಯಮಾನುಸಾರ ಭರಿಸತಕ್ಕದ್ದು.
- ಈ ಆದೇಶದಲ್ಲಿ ಮುಂದುವರೆಸಿರುವ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾವನೆ ಇದ್ದಲ್ಲಿ ಸರ್ಕಾರದ ಪ್ರತ್ಯೇಕ ಮಂಜೂರಾತಿಯನ್ನು ಪಡೆದು ನಂತರವೇ ಅನುಷ್ಠಾನಗೊಳಿಸತಕ್ಕದ್ದು.

- ಪ್ರಸ್ತುತ, ಅನುಷ್ಠಾನದಲ್ಲಿರುವ ಕಟ್ಟಡಗಳಿಗೆ ಅಂದಾಜು ವೆಚ್ಚದ ಶೇಕಡ 25ರಷ್ಟು ಮೊದಲು ಒದಗಿಸಿಕೊಂಡು ನಂತರವೇ ಉಳಿಕೆ ಅನುದಾನವನ್ನು ಹೊಸ ಕಾಮಗಾರಿಗಳಿಗೆ ಉಪಯೋಗಿಸತಕ್ಕದ್ದು. ರಾಜ್ಯ ಹಾಗೂ ಕೇಂದ್ರ ಅನುದಾನದಲ್ಲಿ ಹೊಸ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಮೊದಲು ಸರ್ಕಾರದ ಅನುಮತಿ ಪಡೆಯತಕ್ಕದ್ದು.

- ಮುಂದುವರೆದ ಯೋಜನೆಗಳಡಿಯಲ್ಲಿ ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ- 1999 ಮತ್ತು ಅದರಡಿಯಲ್ಲಿ ಹೊರಡಿಸಲಾದ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

- ಉಪಕರಣ/ಗಣಕ ಯಂತ್ರ ಇತ್ಯಾದಿ ಖರೀದಿಗೆ ಸಂಬಂಧಿಸಿದಂತೆ ಇ-ಆಡಳಿತ ಇಲಾಖೆಯು ಸೂಚಿಸಿರುವಂತೆ ಕ್ರಿಯಾ ಯೋಜನೆಗೆ ರಾಜ್ಯ ಮಟ್ಟದ ಉನ್ನತಾಧಿಕಾರಿ ಸಮಿತಿಯ ಮತ್ತು ತಾಂತ್ರಿಕ ಸಲಹಾ ಸಮಿತಿಯ (TAP) ಅನುಮೋದನೆಯನ್ನು ಪಡೆಯತಕ್ಕದ್ದು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳನ್ನು ಪಾಲಿಸತಕ್ಕದ್ದು.

- ಮಂಜೂರಾದ ತಾತ್ಕಾಲಿಕ ಹುದ್ದೆಗಳ ಬಗ್ಗೆ ಪರಾಮರ್ಶಿಸಿ ಅವುಗಳನ್ನು ಮುಂದುವರೆಸುವ ಅಗತ್ಯತೆ ಅನುಸರಿಸಿ ಮುಂದುವರಿಕೆ ಆದೇಶ ಹೊರಡಿಸಿದ ನಂತರವೇ ವೇತನ ಬಿಡುಗಡೆ ಮಾಡತಕ್ಕದ್ದು.

- ಹುದ್ದೆಗಳನ್ನು ಸೃಜಿಸುವ ಹಾಗೂ ಹೊಸ ವಾಹನಗಳನ್ನು ಖರೀದಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯತಕ್ಕದ್ದು.

- ಕಟ್ಟಡ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಸೂಕ್ತ ಪ್ರಾಧಿಕಾರದಿಂದ ಆಡಳಿತಾತ್ಮಕ/ತಾಂತ್ರಿಕ ಒಪ್ಪಿಗೆ ಪಡೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮಗಳನ್ನು ಪಾಲಿಸಿ ಟೆಂಡರ್ ಪ್ರಕಾರ ಕ್ರಮ ತೆಗೆದುಕೊಳ್ಳುವುದು ಹಾಗೂ ಬಾಕಿ ಬಿಲ್ಲುಗಳ ಪಾವತಿಯ ಮುನ್ನ ಕಾಮಗಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿದ ಬಗ್ಗೆ ದಾಖಲೆಗಳನ್ನು ಪರಿಶೀಲಿಸಿ ದೃಢೀಕರಣ ಆಧರಿಸಿ ಪಾವತಿಸತಕ್ಕದ್ದು.

- ಆರ್ಥಿಕ ಮಿತವ್ಯಯ ಆದೇಶ ಹಾಗೂ ವೆಚ್ಚಕ್ಕೆ ಸಂಬಂಧಿಸಿದಂತೆ. ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ನು ಪಾಲಿಸತಕ್ಕದ್ದು.

- ಕೇಂದ್ರ ಯೋಜನೆಗಳು/ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಕೇಂದ್ರದ ಅನುದಾನ ಸ್ವೀಕೃತವಾಗಿರುವುದನ್ನು ದೃಡಪಡಿಸಿಕೊಂಡ ನಂತರವೇ ಕೇಂದ್ರ ಸಹಾಯದ ಅನುದಾನ/ರಾಜ್ಯದ ಪಾಲಿನ ಅನುದಾನವನ್ನು ಆಯವ್ಯಯದಲ್ಲಿ ಒದಗಿಸಿದ ಅನುದಾನ ಲಭ್ಯತೆ ಆಧರಿಸಿ ಬಿಡುಗಡೆ ಮಾಡತಕ್ಕದ್ದು. ಕೇಂದ್ರ ಸಹಾಯ ಸ್ವೀಕೃತವಾಗಿದ್ದರೂ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಡಿಯಲ್ಲಿ ಅನುದಾನ ಲಭ್ಯವಿರದಿದ್ದರೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸಿ ಅನುದಾನ ಒದಗಿಸಿಕೊಳ್ಳಲು ಸಹಮತ ಪಡೆದ ನಂತರವೇ ಬಿಡುಗಡೆ ಮಾಡತಕ್ಕದ್ದು.

- ಪ್ರತಿಯೊಂದು ಕಾರ್ಯಕ್ರಮಕ್ಕೆ ವೈಜ್ಞಾನಿಕವಾಗಿ ಎಂಪಿಕ್ ಅನ್ನು ಆನ್ಲೈನ್ **ಹೊಸ ಡಿಸಿಷನ್ ಸಪೋರ್ಟಿಂಗ್** ಸಿಸ್ಟಂ (ಅವಲೋಕನ-Portal) ನಲ್ಲಿ ಕಡ್ಡಾಯವಾಗಿ ಕಾಲಕಾಲಕ್ಕೆ ಇಂದೀಕರಿಸತಕ್ಕದ್ದು. ಅಂತರ್ಜಾಲ ಪೋರ್ಟಲ್ ನಲ್ಲಿ ಇಂದೀಕರಿಸಿದ ದತ್ತಾಂಶಗಳನ್ನು ಮಾತ್ರ MPIC ಸಭೆಯಲ್ಲಿ ಪರಿಗಣಿಸಲಾಗುವುದು.

- ಎಸ್.ಸಿ.ಪಿ./ಟಿ.ಎಸ್.ಪಿ/ಎಸ್.ಡಿ.ಪಿ./ಕೆ.ಕೆ.ಆರ್.ಡಿ.ಬಿ/ನರೇಗಾ/RIDF (ನಬಾರ್ಡ್) ಕಾರ್ಯಕ್ರಮಗಳ ಬಗ್ಗೆ ಜಾರಿಯಲ್ಲಿರುವ ಸೂಚನೆಗಳನ್ನು ಪಾಲಿಸಿ, ಸದರಿ ಕಾರ್ಯಕ್ರಮಗಳ ಕ್ರಿಯಾ ಯೋಜನೆ ಅನುಮೋದನೆ ನಂತರ ಅನುದಾನ ಬಿಡುಗಡೆ ಮಾಡತಕ್ಕದ್ದು.

- ಕ್ರಿಯಾ ಯೋಜನೆಯ ಅನುಮೋದಿತ ಕಾರ್ಯಕ್ರಮಗಳನ್ನು ಕಟ್ಟು ನಿಟ್ಟಾಗಿ ಅನುಷ್ಠಾನಗೊಳಿಸಿ ಪ್ರಗತಿಯ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

- ಪರಿಶಿಷ್ಟಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಗಳಡಿ ಒದಗಿಸಲಾದ ಅನುದಾನವನ್ನು ಮೀಸಲು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಶಾಲೆಗಳು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ದಾಖಲಾತಿ ಶೇ.40 ಕ್ಕಿಂತ ಅಧಿಕವಾಗಿರುವ ಶಾಲೆಗಳಿಗೆ ಮಾತ್ರ ಹಂಚಿಕೆ ಮಾಡಿ ಜಿಲ್ಲಾವಾರು/ತಾಲ್ಲೂಕುವಾರು ಮತ್ತು ಶಾಲಾವಾರು ಕ್ರಿಯಾಯೋಜನೆ ಸಿದ್ಧಪಡಿಸಿ ಪ್ರತ್ಯೇಕವಾಗಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸತಕ್ಕದ್ದು.

- ವಿಶೇಷ ಅಭಿವೃದ್ಧಿ ಯೋಜನೆಯಡಿ ಒದಗಿಸಲಾದ ಅನುದಾನದ ಬಳಕೆಗೆ ಸಂಬಂಧಿಸಿದಂತೆ ಎಸ್.ಡಿ.ಪಿ ಯೋಜನೆಯ ಸಿ.ಡಿ.ಐ ಇಂಡೆಕ್ಸ್ ಅನುಸಾರ ಡಾ॥ ನಂಜುಂಡಪ್ಪ ವರದಿಯನ್ವಯ ಹಿಂದುಳಿದ ತಾಲ್ಲೂಕುಗಳೆಂದು ಗುರುತಿಸಲಾಗಿರುವ 114 ತಾಲ್ಲೂಕುಗಳಲ್ಲಿನ ಸರ್ಕಾರಿ ಶಾಲಾ-ಕಾಲೇಜುಗಳ ಮೂಲಭೂತ ಸೌಕರ್ಯ/ನಿರ್ವಹಣೆಗಾಗಿ ಜಿಲ್ಲಾವಾರು/ತಾಲ್ಲೂಕುವಾರು/ ಶಾಲಾವಾರು ಕ್ರಿಯಾಯೋಜನೆ ಸಿದ್ಧಪಡಿಸಿ ಪ್ರತ್ಯೇಕವಾಗಿ ಸರ್ಕಾರದ ಅನುಮೋದನೆ ಪಡೆಯತಕ್ಕದ್ದು.

- 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವ ಹೊಸ ಕಾರ್ಯಕ್ರಮಗಳಿಗೆ ಪ್ರತ್ಯೇಕವಾಗಿ ಕ್ರಿಯಾಯೋಜನೆ ಸಲ್ಲಿಸಿ ಅನುಮೋದನೆ ಪಡೆಯತಕ್ಕದ್ದು.

- ಮುಂದುವರೆದ ಯೋಜನೆಗಳಲ್ಲಿ ಹೊಸ ಘಟಕಗಳ ಬಗ್ಗೆ ಪ್ರಸ್ತಾಪಿಸಿದ್ದರೆ ಅಪರ ಮುಖ್ಯ ಕಾರ್ಯದರ್ಶಿಯವರ ಹಾಗೂ ಅಭಿವೃದ್ಧಿ ಆಯುಕ್ತರ ಸಮಿತಿ ಮುಂದೆ ಸರ್ಕಾರದ ಮುಖಾಂತರ ಮಂಡಿಸಿ ಅನುಮೋದನೆ ಪಡೆಯತಕ್ಕದ್ದು.

- ರಾಜ್ಯದಲ್ಲಿ COVID-19 ವೈರಾಣು ಸೋಂಕು ಇರುವ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯು ನಿಗದಿಪಡಿಸಿರುವ ಮಿತವ್ಯಯ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

- ಆಯಾ ತ್ರೈಮಾಸಿಕ ಅವಧಿಯಲ್ಲಿ ಬಿಡುಗಡೆಯಾಗುವ ಅನುದಾನವನ್ನು ಶೇ.100 ರಷ್ಟು ಬಳಕೆ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಆಇ 02 ಟಿ.ಎಫ್.ಪಿ 2020. ದಿ:30.05.2020 ರಲ್ಲಿ ನೀಡಿರುವ ಸಹಮತದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಹಾಗೂ ಅವರ ಹೆಸರಿನಲ್ಲಿ

18.06.2020

(ಜೆಸ್.ಆರ್.ಎಸ್.ನಾನ್)
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

18/06

ಇವರಿಗೆ:

1. ಮಹಾಲೇಖಪಾಲರು, ಕರ್ನಾಟಕ (ಆಡಿಟ್ 1 & 2) ಬೆಂಗಳೂರು.
2. ಕಾರ್ಯದರ್ಶಿಯವರು, ಆರ್ಥಿಕ ಇಲಾಖೆ(ವೆಚ್ಚ), ವಿಧಾನ ಸೌಧ, ಬೆಂಗಳೂರು.
3. ಕಾರ್ಯದರ್ಶಿಗಳು, ಯೋಜನಾ ಇಲಾಖೆ, ಬೆಂಗಳೂರು.
4. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
5. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

6. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರ್ಗಿ.
7. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು
8. ನಿರ್ದೇಶಕರು ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.
9. ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು/ಮುಖ್ಯ ಲೆಕ್ಕಾಧಿಕಾರಿಗಳು
10. ನಿರ್ದೇಶಕರು, ಖಜಾನೆ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಬೆಂಗಳೂರು
11. ಉಪ ನಿರ್ದೇಶಕರು, ಖಜಾನೆ ಗಣಕ ಕೇಂದ್ರ, #49, ಖನಿಜ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು
12. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು.
13. ನಿರ್ದೇಶಕರು (ಪ್ರಾಥಮಿಕ/ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
14. ನಿರ್ದೇಶಕರು, ಡಿ.ಎಸ್.ಇ.ಆರ್.ಟಿ, ಬನಶಂಕರಿ, ಬೆಂಗಳೂರು.
15. ನಿರ್ದೇಶಕರು ಲೋಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.
16. ನಿರ್ದೇಶಕರು ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು.
17. ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು.
18. ನಿರ್ದೇಶಕರು, ಉರ್ದು&ಇತ ಅಲ್ಪಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶನಾಲಯ, ಬೆಂಗಳೂರು
19. ಜಂಟಿ ನಿರ್ದೇಶಕರು, ಮಧ್ಯಾಹ್ನ ಉಪಹಾರ ಯೋಜನೆ, ಬೆಂಗಳೂರು.
20. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂ (ರಿ), ಬನಶಂಕರಿ, ಬೆಂಗಳೂರು.
21. ಸಂಬಂಧಿಸಿದ ಪ್ರಾಂಶುಪಾಲರು ಡಯಟ್/ಸಿಟಿಇ, ಸಾರ್ವಜನಿಕ ಶಿಕ್ಷಣ ಇಲಾಖೆ
22. ಜಿಲ್ಲಾ ಉಪನಿರ್ದೇಶಕರು (ಆಡಳಿತ/ ಅಭಿವೃದ್ಧಿ), ಸಾರ್ವಜನಿಕ ಶಿಕ್ಷಣ ಇಲಾಖೆ.
23. ಸಂಬಂಧಿಸಿದ ಜಿಲ್ಲಾ ಹಾಗೂ ತಾಲ್ಲೂಕು ಖಜಾನೆಗಳು
24. ಕರ್ನಾಟಕ ರಾಜ್ಯ ಪತ್ರ/ಕಚೇರಿ ಕಡತ ಪ್ರತಿ/ಹೆಚ್ಚುವರಿ ಪ್ರತಿಗಳು.
25. ಸಂಯೋಜಕರು, ಮಾಹಿತಿ ಕೇಂದ್ರ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು.
26. ಸಹಾಯಕರು, ಖಜಾನೆ-2, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು.

ಪ್ರತಿ ಮಾಹಿತಿಗಾಗಿ.

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು
3. ಆಂತರಿಕ ಆರ್ಥಿಕ ಸಲಹೆಗಾರರ ಆಪ್ತ ಸಹಾಯಕರು, ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

ಅನುಬಂಧ

# 2020–21ನೇ ಸಾಲಿನಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಮುಂದುವರಿಕಾ ಕಾರ್ಯಕ್ರಮಗಳಿಗೆ ಆಡಳಿತಾತ್ಮಕ ಅನುಮೋದನೆ

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020–21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | | |
| 1 | 2202–01–053–0–01 | ಶಾಲಾ ಕಟ್ಟಡಗಳ ನಿರ್ವಹಣೆ | | |
| | 200 | ನಿರ್ವಹಣಾ ವೆಚ್ಚ | 1603.00 | ಸದರಿ ಅನುದಾನವನ್ನು ನರೇಗಾ ಯೋಜನೆಯಡಿ ಶಾಲಾ ಶೌಚಾಲಯ, ಆಟದ ಮೈದಾನ ಮತ್ತು ಶಾಲಾ ಕಾಂಪೌಂಡ್ ನಿರ್ಮಿಸಲು Matching grant ಆಗಿ ಉಪಯೋಗಿಸತಕ್ಕದ್ದು. ಈ ಸಂಬಂಧ ಪ್ರತ್ಯೇಕ ಮಾರ್ಗಸೂಚಿ ಹೊರಡಿಸಲಾಗುವುದು. |
| 2 | 2202–01–053–0–02 | ಶಾಲಾ ಸೌಲಭ್ಯಗಳ ನಿರ್ವಹಣೆ | | |
| | 059 | ಇತರೆ ವೆಚ್ಚಗಳು | 900.00 | ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಕುಡಿಯುವ ನೀರು ಮತ್ತು ಶೌಚಾಲಯ ನಿರ್ವಹಣೆಗಾಗಿ ಅನುದಾನವನ್ನು ಆಯುಕ್ತರ ಕಛೇರಿಯಿಂದ ಖಜಾನೆ-2ರಲ್ಲಿ ನೇರವಾಗಿ ಶಾಲೆಗಳ ಎಸ್.ಡಿ.ಎಂ.ಸಿ ಖಾತೆಗಳಿಗೆ ಬಿಡುಗಡೆ ಮಾಡುವುದು.<br>20795 ಕಿರಿಯ ಪ್ರಾಥಮಿಕ ಶಾಲೆಗಳಿಗೆ, ಪ್ರತಿ ಶಾಲೆಗೆ ವಾರ್ಷಿಕ ರೂ.5400/–ರಂತೆ ಒಟ್ಟು ರೂ.1122.93 ಲಕ್ಷ.<br>22490 ಹಿರಿಯ ಪ್ರಾಥಮಿಕ ಶಾಲೆಗಳಿಗೆ ಪ್ರತಿ ಶಾಲೆಗೆ ರೂ.6790/– ರಂತೆ ವಾರ್ಷಿಕವಾಗಿ ಒಟ್ಟು ರೂ.1527.07 ಲಕ್ಷ.<br>4727 ಪ್ರೌಢ ಶಾಲೆಗಳಿಗೆ ಪ್ರತಿ ಶಾಲೆಗೆ ರೂ.7400/– ರಂತೆ ವಾರ್ಷಿಕವಾಗಿ ರೂ.350.00 ಲಕ್ಷ.<br>ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಅನುದಾನವನ್ನು ಮೀಸಲು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಶಾಲೆಗಳು ಮತ್ತು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ದಾಖಲಾತಿ ಅಧಿಕವಾಗಿರುವ ಶಾಲೆಗಳಿಗೆ ಹಾಗೂ ವಿಶೇಷ ಅಭಿವೃದ್ಧಿ ಯೋಜನೆ ಅನುದಾನವನ್ನು 114 ಹಿಂದುಳಿದ ತಾಲ್ಲೂಕುಗಳ ಶಾಲೆಗಳ ಕುಡಿಯುವ ನೀರು ಮತ್ತು ಶೌಚಾಲಯಗಳ ನಿರ್ವಹಣೆಗಾಗಿ ಹಂಚಿಕೆ ಮಾಡುವುದು. |
| | 133 | ವಿಶೇಷ ಅಭಿವೃದ್ಧಿ ಯೋಜನೆ (SDP) | 780.00 | |
| | 422 | ಪರಿಶಿಷ್ಟಜಾತಿ ಉಪ ಯೋಜನೆ | 720.00 | |
| | 423 | ಗಿರಿಜನ ಉಪ ಯೋಜನೆ | 600.00 | |
| | | ಒಟ್ಟು | 3000.00 | |

| ಕ್ರ. ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 3 | 2202-02-053-0-01 | ಸೆಕೆಂಡರಿ ಸ್ಕೂಲ್ ಕಟ್ಟಡಗಳ ನಿರ್ವಹಣೆ | | |
| | 059 | ಇತರೆ ವೆಚ್ಚಗಳು | 2628.00 | 2017-18 ಮತ್ತು 2018-19ನೇ ಸಾಲಿನ ಆಯವ್ಯಯ ಘೋಷಿತ 276 ಕರ್ನಾಟಕ ಪಬ್ಲಿಕ್ ಶಾಲೆಗಳ ಕಟ್ಟಡ ನಿರ್ವಹಣೆಗಾಗಿ ತಲಾ ರೂ.5.00 ಲಕ್ಷಗಳಂತೆ ಒಟ್ಟು **ರೂ.1380.00 ಲಕ್ಷಗಳು.**<br>ರಾಜ್ಯದ 74 ಆದರ್ಶ ವಿದ್ಯಾಲಯ ಶಾಲಾ ಕಟ್ಟಡಗಳ ನಿರ್ವಹಣೆಗಾಗಿ ತಲಾ ರೂ.6.00 ಲಕ್ಷದಂತೆ ಒಟ್ಟು **ರೂ.444.00ಲಕ್ಷಗಳು.**<br>ರಾಜ್ಯದ 86 ಕೆ.ಕೆ.ಜಿ.ಬಿ.ವಿ ಶಾಲೆಗಳ ಕಟ್ಟಡ ನಿರ್ವಹಣೆಗಾಗಿ ತಲಾ ರೂ.3.00 ಲಕ್ಷಗಳಂತೆ ಒಟ್ಟು **ರೂ.258.00 ಲಕ್ಷಗಳು.**<br>ಕಳೆದ ಮೂರು ವರ್ಷಗಳಲ್ಲಿ ಅನುದಾನ ನೀಡಿರುವ ಪ್ರೌಢ ಶಾಲೆಗಳನ್ನು ಹೊರತುಪಡಿಸಿ ಅದ್ಯತೆಯ ಮೇರೆಗೆ ಸರ್ಕಾರಿ ಪ್ರೌಢ ಶಾಲೆಗಳ ಕಟ್ಟಡ ನಿರ್ವಹಣೆ, ದುರಸ್ತಿಗಾಗಿ **ರೂ.1318.00 ಲಕ್ಷಗಳು.**<br>ಅನುದಾನವನ್ನು ಆಯುಕ್ತರ ಕಛೇರಿಯಿಂದ ಖಜಾನೆ-2ರಲ್ಲಿ ನೇರವಾಗಿ ಶಾಲೆಗಳ ಎಸ್.ಡಿ.ಎಂ.ಸಿ ಖಾತೆಗಳಿಗೆ ಬಿಡುಗಡೆ ಮಾಡಲು ಮತ್ತು ಪ.ಜಾ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಅನುದಾನವನ್ನು ಮೀಸಲು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಶಾಲೆಗಳು ಮತ್ತು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ದಾಖಲಾತಿ ಶೇ.50 ಕ್ಕಿಂತ ಅಧಿಕವಾಗಿರುವ ಶಾಲೆಗಳಿಗೆ ಹಂಚಿಕೆ ಮಾಡಲು ಜಿಲ್ಲಾವಾರು/ತಾಲ್ಲೂಕುವಾರು ಮತ್ತು ಶಾಲಾವಾರು ಕ್ರಿಯಾಯೋಜನೆ ಸಿದ್ಧಪಡಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವುದು. |
| | 422 | ಪರಿಶಿಷ್ಟಜಾತಿ ಉಪ ಯೋಜನೆ | 432.00 | |
| | 423 | ಗಿರಿಜನ ಉಪ ಯೋಜನೆ | 340.00 | |
| | | ಒಟ್ಟು | **3400.00** | |
| 4 | 2202-01-102-0-05 | ಸರ್ಕಾರೇತರ ಪ್ರಾಥಮಿಕ ಶಾಲೆಗಳಿಗೆ ಸಹಾಯ-ಆರ್.ಟಿ.ಇ ಅಡಿಯ ಖಾಸಗಿ ಶಾಲೆಗಳ ಶುಲ್ಕ ಮರುಪಾವತಿ | | |
| | 059 | ಇತರೆ ವೆಚ್ಚಗಳು | 28600.00 | ಶಿಕ್ಷಣ ಹಕ್ಕು ಕಾಯ್ದೆಯಡಿ 2012-13ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಖಾಸಗಿ ಅನುದಾನ ರಹಿತ ಶಾಲೆಗಳಲ್ಲಿ ದಾಖಲಾಗಿರುವ 644493 ಮಕ್ಕಳ ಬಾಕಿ ಶುಲ್ಕ ಮರುಪಾವತಿ ಮತ್ತು 2020-21ನೇ ಸಾಲಿನಲ್ಲಿ ಎಲ್.ಕೆ.ಜಿ & 1ನೇ ತರಗತಿಗೆ ದಾಖಲಾಗುವ ಅಂದಾಜು 5000 ಮಕ್ಕಳ ಶುಲ್ಕ ಮರುಪಾವತಿಯ ವೆಚ್ಚವನ್ನು ಆದ್ಯತೆಯ ಮೇಲೆ ಭರಿಸಲು. |
| | 422 | ಪರಿಶಿಷ್ಟಜಾತಿ ಉಪ ಯೋಜನೆ | 18700.00 | |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | 423 | ಗಿರಿಜನ ಉಪ ಯೋಜನೆ | 7700.00 | ದಿನಾಂಕ:28.05.2020 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಪರಿಷತ್ ಸಭಾವಳಿಯಲ್ಲಿ ಅನುಮೋದಿಸಿರುವಂತೆ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಒದಗಿಸಲಾದ ಅನುದಾನವನ್ನು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ಶುಲ್ಕ ಮರುಪಾವತಿಗಾಗಿ ಬಳಸುವುದು. |
| | | ಒಟ್ಟು | 55000.00 | |
| 5 | 2202-01-109-0-03 | ವಿದ್ಯಾವಿಕಾಸ ಯೋಜನೆ | | |
| | 221 | ಸಾಮಾಗ್ರಿ ಮತ್ತು ಸರಬರಾಜು | 27376.00 | 1) **ಸಮವಸ್ತ್ರ:** ಸರ್ಕಾರಿ ಶಾಲೆಗಳಲ್ಲಿನ 1 ರಿಂದ 10ನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಅಂದಾಜು 42.80 ಲಕ್ಷ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಒಂದು ಜೊತೆ ಉಚಿತ ಸಮವಸ್ತ್ರ ಬಟ್ಟೆ ಒದಗಿಸಲು ಮತ್ತು ಸಮವಸ್ತ್ರ ಸಾಗಣೆ ವೆಚ್ಚ ಭರಿಸಲು- **ರೂ.7764.00ಲಕ್ಷಗಳು.** |
| | 422 | ಪರಿಶಿಷ್ಟಜಾತಿ ಉಪ ಯೋಜನೆ | 8556.00 | 2) **ಪಠ್ಯಪುಸ್ತಕ:** ಸರ್ಕಾರಿ ಶಾಲೆಗಳಲ್ಲಿ 1 ರಿಂದ 10ನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಉಚಿತ ಪಠ್ಯಪುಸ್ತಕ. ಅಭ್ಯಾಸ ಪುಸ್ತಕ ಮತ್ತು ಶಾಲಾ ದಿನಚರಿ **(School Diary)** ಒದಗಿಸಲು ಈಗಾಗಲೇ 2019-20ನೇ ಸಾಲಿನಲ್ಲಿ ಮುಂಗಡವಾಗಿ ರೂ.2883.49 ಲಕ್ಷಗಳನ್ನು ಒದಗಿಸಲಾಗಿದ್ದು, ಪ್ರಸ್ತುತ ರೂ. **ರೂ.15671.51** ಲಕ್ಷಗಳು ಒದಗಿಸಲಾಗಿದೆ (ಒಟ್ಟು 2883.49+15671.51=18555.00 ಲಕ್ಷಗಳು) ಹಾಗೂ ಅಂಧ ಮಕ್ಕಳ ಪಠ್ಯಪುಸ್ತಕಗಳನ್ನು ಇ-ಪಬ್ ನಲ್ಲಿ ಅಳವಡಿಸಲು **ರೂ.200.00** ಲಕ್ಷಗಳು ಒಟ್ಟಾರೆ-**ರೂ.15871.51** ಲಕ್ಷಗಳು. |
| | 423 | ಗಿರಿಜನ ಉಪ ಯೋಜನೆ | 2566.00 | 3) ಉಳಿಕೆ ಅನುದಾನ **ರೂ.14862.49** ಲಕ್ಷಗಳು.<br>4) ಉಚಿತ ಬೈಸಿಕಲ್ ವಿತರಣೆ ಹಾಗೂ 2ನೇ ಜೊತೆ ಸಮವಸ್ತ್ರ ವಿತರಣೆ ಕಾರ್ಯಕ್ರಮ ಅನುಷ್ಠಾನಕ್ಕಾಗಿ ಕೊರತೆ ಉಂಟಾಗುವ ಅನುದಾನಕ್ಕಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸತಕ್ಕದ್ದು. |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | | ಒಟ್ಟು | 38498.00 | ದಿನಾಂಕ:28.05.2020 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಪರಿಷತ್ ನಡಾವಳಿಯಲ್ಲಿ ಅನುಮೋದಿಸಿರುವಂತೆ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಒದಗಿಸಲಾದ ಅನುದಾನವನ್ನು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಬಳಸಲು ಕ್ರಿಯಾ ಯೋಜನೆ ಸಲ್ಲಿಸುವುದು. |
| 6 | 2202-02-001-0-03 | ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು-ಬೆಂಗಳೂರು | | |
| | 051 | ಸಾಮಾನ್ಯ ವೆಚ್ಚ | 150.00 | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಅಧೀನದ ಕಛೇರಿಯ ಸಾಮಾನ್ಯ ವೆಚ್ಚ, ದೂರವಾಣಿ ವೆಚ್ಚ, ಕಚೇರಿ ಪೀಠೋಪಕರಣಗಳು ಮತ್ತು ಜೋಡಣೆಗಳ ಖರೀದಿ, ಕಟ್ಟಡ ವೆಚ್ಚ ಹಾಗೂ ಸಾರಿಗೆ ವೆಚ್ಚಗಳನ್ನು ಭರಿಸಲು |
| | 052 | ದೂರವಾಣಿ ವೆಚ್ಚ | 3.00 | |
| | 053 | ಕಛೇರಿ ಪೀಠೋಪಕರಣಗಳು ಮತ್ತು ಜೋಡಣೆಗಳ ಖರೀದಿ | 1.00 | |
| | 071 | ಕಟ್ಟಡ ವೆಚ್ಚಗಳು | 80.00 | |
| | 195 | ಸಾರಿಗೆ ವೆಚ್ಚಗಳು | 25.00 | |
| | | ಒಟ್ಟು | 259.00 | |
| 7 | 2202-02-001-0-05 | ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತಾಲಯ-ಕಲಬುರ್ಗಿ | | |
| | 051 | ಸಾಮಾನ್ಯ ವೆಚ್ಚ | 30.00 | ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರ್ಗಿ, ಅಧೀನದ ಕಛೇರಿಯ ಸಾಮಾನ್ಯ ವೆಚ್ಚ, ದೂರವಾಣಿ ವೆಚ್ಚ, ಕಟ್ಟಡ ವೆಚ್ಚ ಹಾಗೂ ಸಾರಿಗೆ ವೆಚ್ಚಗಳನ್ನು ಭರಿಸಲು |
| | 052 | ದೂರವಾಣಿ ವೆಚ್ಚ | 2.00 | |
| | 071 | ಕಟ್ಟಡ ವೆಚ್ಚಗಳು | 20.00 | |
| | 195 | ಸಾರಿಗೆ ವೆಚ್ಚಗಳು | 5.00 | |
| | | ಒಟ್ಟು | 57.00 | |
| 8 | 2202-02-001-0-06 | ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತಾಲಯ-ಧಾರವಾಡ | | |
| | 051 | ಸಾಮಾನ್ಯ ವೆಚ್ಚ | 15.00 | ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಅಧೀನದ ಕಛೇರಿಯ ಸಾಮಾನ್ಯ ವೆಚ್ಚ, ಹಾಗೂ ಸಾರಿಗೆ ವೆಚ್ಚಗಳನ್ನು ಭರಿಸಲು |
| | 195 | ಸಾರಿಗೆ ವೆಚ್ಚಗಳು | 10.00 | |
| | | ಒಟ್ಟು | 25.00 | |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 9 | 2202-02-110-3-03 | ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಸೈನಿಕ ಶಾಲೆ | | |
| | 102 | ಸಹಾಯಾನುದಾನ - ಆಸ್ತಿಗಳ ಸೃಜನೆ | 100.00 | ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಆಡಳಿತಾತ್ಮಕ ವೆಚ್ಚಗಳು ಹಾಗೂ ಇತರೆ ಮುಂದುವರೆದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು. |
| | 103 | ಸಹಾಯಾನುದಾನ - ಸಾಮಾನ್ಯ | 150.00 | |
| | 117 | ವಿದ್ಯಾರ್ಥಿ ವೇತನಗಳು ಮತ್ತು ಪ್ರೋತ್ಸಾಹ | 253.00 | |
| | | ಒಟ್ಟು | **503.00** | |
| 10 | 2202-02-110-3-10 | ಸೈನಿಕ ಶಾಲೆ, ಬಿಜಾಪುರ | | |
| | 102 | ಸಹಾಯಾನುದಾನ - ಆಸ್ತಿಗಳ ಸೃಜನೆ | 250.00 | ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಆಡಳಿತಾತ್ಮಕ ವೆಚ್ಚಗಳು ಹಾಗೂ ಇತರೆ ಮುಂದುವರೆದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು |
| | 103 | ಸಹಾಯಾನುದಾನ - ಸಾಮಾನ್ಯ | 150.00 | |
| | 117 | ವಿದ್ಯಾರ್ಥಿ ವೇತನಗಳು ಮತ್ತು ಪ್ರೋತ್ಸಾಹ | 373.00 | |
| | | ಒಟ್ಟು | **773.00** | |
| 11 | 2202-02-110-3-11 | ಸೈನಿಕ ಶಾಲೆ, ಕೊಡಿಗೆ | | |
| | 102 | ಸಹಾಯಾನುದಾನ - ಆಸ್ತಿಗಳ ಸೃಜನೆ | 300.00 | ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಆಡಳಿತಾತ್ಮಕ ವೆಚ್ಚಗಳು ಹಾಗೂ ಇತರೆ ಮುಂದುವರೆದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು |
| | 103 | ಸಹಾಯಾನುದಾನ - ಸಾಮಾನ್ಯ | 150.00 | |
| | 117 | ವಿದ್ಯಾರ್ಥಿ ವೇತನಗಳು ಮತ್ತು ಪ್ರೋತ್ಸಾಹ | 363.00 | |
| | | ಒಟ್ಟು | **813.00** | |
| 12 | 2202-80-800-0-30 | ಭಾರತ ಸೇವಾದಳ | | |
| | 101 | ಸಹಾಯಾನುದಾನ - ವೇತನಗಳು | 110.00 | ಭಾರತ ಸೇವಾದಳ ಸಂಸ್ಥೆಯ ಸಹಾಯಾನುದಾನ, ಆಸ್ತಿಗಳ ಸೃಜನೆ, ವಿದ್ಯಾರ್ಥಿವೇತನಗಳು ಹಾಗೂ ಪ್ರೋತ್ಸಾಹಕಗಳು ಹಾಗೂ ಇತರೆ ಕಾರ್ಯಚಟುವಟಿಕೆಗಳಿಗಾಗಿ. |
| | 103 | ಸಹಾಯಾನುದಾನ - ಸಾಮಾನ್ಯ | 100.00 | |
| | 115 | ಸಹಾಯಾನುದಾನ ಗುತ್ತಿಗೆ/ಹೊರಗುತ್ತಿಗೆ | 26.00 | |
| | | ಒಟ್ಟು | **236.00** | |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 13 | **2204-00-103-0-11** | ಭಾರತ ಸ್ಕೌಟ್ಸ್ ಸಂಸ್ಥೆ | | |
| | 101 | ಸಹಾಯಾನುದಾನ - ವೇತನಗಳು | 188.00 | ಭಾರತ ಸ್ಕೌಟ್ಸ್ ಸಂಸ್ಥೆಯ ಮತ್ತು ಗೈಡ್ಸ್ ಸಂಸ್ಥೆಯ ಸಹಾಯಾನುದಾನ ಹಾಗೂ ಸಿಬ್ಬಂದಿ ವೇತನ ವೆಚ್ಚಗಳನ್ನು ಭರಿಸಲು |
| | 103 | ಸಹಾಯಾನುದಾನ - ಸಾಮಾನ್ಯ | 600.00 | |
| | 115 | ಸಹಾಯಾನುದಾನ - ಗುತ್ತಿಗೆ/ಹೊರಗುತ್ತಿಗೆ | 9.00 | |
| | | ಒಟ್ಟು | **797.00** | |
| 14 | **2204-00-101-0-02** | ರಾಷ್ಟ್ರೀಕೃತ ದೈಹಿಕ ಶಿಕ್ಷಣ ಸಂಸ್ಥೆ, ಚಿಕ್ಕಬಳ್ಳಾಪುರ | | |
| | 051 | ಸಾಮಾನ್ಯ ವೆಚ್ಚ | 1.00 | ರಾಷ್ಟ್ರೀಕೃತ ದೈಹಿಕ ಶಿಕ್ಷಣ ಸಂಸ್ಥೆಯ ಸಾಮಾನ್ಯ ಮತ್ತು ಕಟ್ಟಡ ವೆಚ್ಚ ಭರಿಸಲು. |
| | 071 | ಕಟ್ಟಡ ವೆಚ್ಚಗಳು | 1.00 | |
| | | ಒಟ್ಟು | **2.00** | |
| 15 | **2204-00-101-0-04** | ದೈಹಿಕ ಶಿಕ್ಷಣ ಮಹಾವಿದ್ಯಾಲಯಗಳಿಗೆ ಅನುದಾನ | | |
| | 103 | ಸಹಾಯಾನುದಾನ ಸಾಮಾನ್ಯ | 8.00 | ದೈಹಿಕ ಶಿಕ್ಷಣ ಮಹಾವಿದ್ಯಾಲಯಕ್ಕೆ ಸಹಾಯಾನುದಾನ. |
| 16 | **2202-80-800-0-47** | ಗುಣಮಟ್ಟ ಭರವಸೆ ಉಪಕ್ರಮಗಳು | | |
| | 059 | ಇತರೆ ವೆಚ್ಚಗಳು | 500.00 | 1. ಕೆ. ಎಸ್. ಕ್ಯೂ. ಎ. ಎ. ಸಿ. ಕಾರ್ಯಕ್ರಮ: NTSE/ NMMS/ ಗಣಿತ/ ವಿಜ್ಞಾನ ಕಿಟ್ ವಿತರಣೆಗಾಗಿ **ರೂ.175.00 ಲಕ್ಷಗಳು.**<br>2. ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡಿ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತಮಸಾಧನೆ ಮಾಡಿದ 03 ವಿದ್ಯಾರ್ಥಿಗಳಿಗೆ ಲ್ಯಾಪ್ ಟಾಪ್ ವಿತರಣೆ: ಜಿಲ್ಲಾ ಮಟ್ಟಕ್ಕೆ 34*3=102, ತಾಲ್ಲೂಕು ಮಟ್ಟಕ್ಕೆ 204*3=612 ಮತ್ತು ಸಮಾನ ಅಂಕ ಪಡೆಯಬಹುದಾದ ವಿದ್ಯಾರ್ಥಿಗಳನ್ನು ಒಳಗೊಂಡಂತೆ ಲ್ಯಾಪ್ ಟಾಪ್ ಗಣಕ ಯಂತ್ರಗಳ ಖರೀದಿಗಾಗಿ **ರೂ.275.00 ಲಕ್ಷಗಳು.**<br>3. ವಿಜ್ಞಾನ ಮೇಳ: ನಾಟಕ, ವಿಚಾರಗೋಷ್ಠಿ, ವಸ್ತು ಪ್ರದರ್ಶನ, ರಸಪ್ರಶ್ನೆ, ಕಾರ್ಯಕ್ರಮಗಳಿಗಾಗಿ **ರೂ.50.00 ಲಕ್ಷಗಳು.**<br><br>ಪ್ರಸ್ತುತ ಕೋವಿಡ್-19 ಸೋಂಕು ಇರುವ ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಸಬೇಕಾಗಿರುವುದರಿಂದ ಅಗತ್ಯತೆಗೆ ಅನುಗುಣವಾಗಿ ಮೇಲ್ಕಂಡ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕಡ್ಡಾಯವಾಗಿ ಪ್ರತ್ಯೇಕವಾದ ಕ್ರಿಯಾ ಯೋಜನೆಯನ್ನು ಸಲ್ಲಿಸಿ ಅನುಮೋದನೆ ಪಡೆಯತಕ್ಕದ್ದು. |

| ಕ್ರ. ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 17 | 2202-80-800-0-48 | ಶಿಕ್ಷಣ ಗುಣಮಟ್ಟ ಸುಧಾರಣೆ ಉಪಕ್ರಮ | | |
| | 059 | ಇತರೆ ವೆಚ್ಚಗಳು | 500.00 | 1. 1000 ಆಂಗ್ಲ ಮಾಧ್ಯಮ ಶಾಲೆಗಳ 1 ಮತ್ತು 2ನೇ ತರಗತಿ ಶಿಕ್ಷಕರಿಗೆ ಓರಿಯಂಟೇಷನ್ ಮತ್ತು ಇಂಡಕ್ಷನ್ ತರಬೇತಿಗಾಗಿ ರೂ.200.00 ಲಕ್ಷಗಳು.<br>2. ಶ್ರೀ. ಆಲೂರು ವೆಂಕಟರಾಯರ 4 ಭಾಷಾ ಕೌಶಲ್ಯ ಕೇಂದ್ರಗಳ ಮೂಲಕ ಭಾಷೆಗಳ ಅಭಿವೃದ್ಧಿ ಹಾಗೂ ಕೌಶಲ್ಯ ಹೆಚ್ಚಿಸಲು ನಡೆಸುವ ಕಾರ್ಯ ಚಟುವಟಿಕೆಗಳಿಗಾಗಿ ರೂ.200.00 ಲಕ್ಷಗಳು.<br>3. 2020-21ನೇ ಸಾಲಿಗೆ RIESI ವತಿಯಿಂದ ಶಿಕ್ಷಕರಿಗೆ ಆಂಗ್ಲ ಭಾಷಾ ಬೋಧನಾ ಸಾಮರ್ಥ್ಯ ವೃದ್ಧಿಸಲು Professional Development Programme ಕಾರ್ಯಕ್ರಮಕ್ಕಾಗಿ ರೂ.100.00 ಲಕ್ಷಗಳು.<br><br>ಪ್ರಸ್ತುತ ಕೋವಿಡ್-19 ಸೋಂಕು ಇರುವ ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಬೇಕಾಗಿರುವುದರಿಂದ ಅಗತ್ಯತೆಗೆ ಅನುಗುಣವಾಗಿ ಮೇಲ್ಕಂಡ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕಡ್ಡಾಯವಾಗಿ ಪ್ರತ್ಯೇಕವಾದ ಕ್ರಿಯಾ ಯೋಜನೆಯನ್ನು ಸಲ್ಲಿಸಿ ಅನುಮೋದನೆ ಪಡೆಯತಕ್ಕದ್ದು. |
| 18 | 2202-80-800-0-49 | ವಿದ್ಯಾರ್ಥಿ ಪ್ರೇರಣಾ ಉಪಕ್ರಮಗಳು | | |
| | 059 | ಇತರೆ ವೆಚ್ಚಗಳು | 500.00 | 1) ಪ್ರತಿಭಾ ಕಾರಂಜಿ: ಪ್ರತಿಭಾ ಕಾರಂಜಿ ಕಾರ್ಯಕ್ರಮದಲ್ಲಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು, ಕಲೋತ್ಸವ ಕಾರ್ಯಕ್ರಮವನ್ನು, ತಾಲ್ಲೂಕು ಮಟ್ಟ, ಜಿಲ್ಲಾ ಮಟ್ಟ ಮತ್ತು ರಾಜ್ಯಮಟ್ಟದಲ್ಲಿ ಹಮ್ಮಿಕೊಳ್ಳಲು ಒಟ್ಟು ರೂ.300.00 ಲಕ್ಷಗಳು.<br>2) ಕ್ರೀಡಾಕೂಟ: ಹೋಬಳಿ ಮಟ್ಟ(769), ತಾಲ್ಲೂಕು ಮಟ್ಟ(204), ಜಿಲ್ಲಾಮಟ್ಟ(34) ಮತ್ತು ರಾಷ್ಟ್ರಮಟ್ಟದ ಕ್ರೀಡಾಕೂಟಗಳನ್ನು ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತಗಳಲ್ಲಿ ಆಯೋಜಿಸಲು- ರೂ.195.00 ಲಕ್ಷಗಳು.<br>3) ಯುವ ಸಂಸತ್ ಸ್ಪರ್ಧೆ: ಜಿಲ್ಲೆ ಮತ್ತು ರಾಜ್ಯ ಮಟ್ಟದ ಸ್ಪರ್ಧೆಗಳಿಗೆ ರೂ.5.00 ಲಕ್ಷಗಳು.<br><br>ಪ್ರಸ್ತುತ ಕೋವಿಡ್-19 ಸೋಂಕು ಇರುವ ಹಿನ್ನೆಲೆಯಲ್ಲಿ ಆರ್ಥಿಕ ಮಿತವ್ಯಯ ಸಾಧಿಬೇಕಾಗಿರುವುದರಿಂದ ಅಗತ್ಯತೆಗೆ ಅನುಗುಣವಾಗಿ ಮೇಲ್ಕಂಡ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕಡ್ಡಾಯವಾಗಿ ಪ್ರತ್ಯೇಕವಾದ ಕ್ರಿಯಾ ಯೋಜನೆಯನ್ನು ಸಲ್ಲಿಸಿ ಅನುಮೋದನೆ ಪಡೆಯತಕ್ಕದ್ದು. |
| | | ಒಟ್ಟು | 500.00 | |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 19 | 2202-80-107-0-01 | ಮಿಲಿಟರಿ ವಿದ್ಯಾರ್ಥಿವೇತನಗಳು | | |
| | 117 | ವಿದ್ಯಾರ್ಥಿ ವೇತನಗಳು ಮತ್ತು ಪ್ರೋತ್ಸಾಹ | 8.00 | ಕರ್ನಾಟಕದಿಂದ 12ನೇ ತರಗತಿ ನಂತರ National Defence Academy ಯಲ್ಲಿ ಹಾಗೂ 7ನೇ ತರಗತಿ ನಂತರ ಭಾರತೀಯ ಮಿಲಿಟರಿ ಶಾಲೆಯಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪಾವತಿಸಲು. |
| 20 | 2202-80-003-0-07 | ರಾಜ್ಯ ಶಾಲಾ ನಾಯಕತ್ವ, ಶೈಕ್ಷಣಿಕ ಯೋಜನೆ ಮತ್ತು ನಿರ್ವಹಣೆ ಸಂಸ್ಥೆ (SISLEP) | | |
| | 059 | ಇತರೆ ವೆಚ್ಚಗಳು | 100.00 | ರಾಜ್ಯ ಶಾಲಾ ಹೊಣೆಗಾರಿಕೆ ಮತ್ತು ಶೈಕ್ಷಣಿಕ ಯೋಜನೆ ನಿರ್ವಹಣೆ(ಸಿಸ್ಲೆಪ್)ಕಾರ್ಯಕ್ರಮಕ್ಕಾಗಿ- ನಿರ್ದೇಶಕರ ಮತ್ತು ಸಿಬ್ಬಂದಿಗಳ ವೇತನ. ವಾಹನದ ವೆಚ್ಚ, ಸಾದಿಲ್ವಾರು ವೆಚ್ಚ, ನಿರ್ವಹಣೆ. ನವೀಕರಣ ಮೊದಲಾದ ಉದ್ದೇಶಗಳಿಗೆ. |
| 21 | 4202-01-201-1-04 | ಪ್ರಾಥಮಿಕ ಶಾಲೆಗಳಿಗೆ ಮೂಲಭೂತ ಸೌಕರ್ಯ | | |
| | 059 | ಇತರೆ ವೆಚ್ಚಗಳು | 3555.00 | ರಾಜ್ಯದ 34 ಶೈಕ್ಷಣಿಕ ಜಿಲ್ಲೆಗಳಲ್ಲಿನ **ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ** ಅಗತ್ಯವಿರುವ ಶಾಲಾ ಕಟ್ಟಡ/ಕೊಠಡಿ ನಿರ್ಮಾಣ ಮಾಡಲು ರೂ.3255.00 ಲಕ್ಷಗಳಿಗೆ ಜಿಲ್ಲೆ/ತಾಲ್ಲೂಕು/ಶಾಲಾವಾರು ಕ್ರಿಯಾಯೋಜನೆ ಸಿದ್ಧಪಡಿಸಿ, ಸರ್ಕಾರದ ಅನುಮೋದನೆಗೆ ಶೀಘ್ರವಾಗಿ ಸಲ್ಲಿಸುವುದು. |
| | 180 | ಯಂತ್ರೋಪಕರಣಗಳು ಮತ್ತು ಸಾಧನ ಸಾಮಾಗ್ರಿ | 2000.00 | |
| | 422 | ಪರಿಶಿಷ್ಟಜಾತಿ ಉಪಯೋಜನೆ | 267.00 | |
| | 423 | ಗಿರಿಜನ ಉಪಯೋಜನೆ | 178.00 | TALP ಕಾರ್ಯಕ್ರಮದ ಅಡಿಯಲ್ಲಿ ಸರ್ಕಾರಿ ಶಾಲೆಗಳಿಗೆ ಕಂಪ್ಯೂಟರ್, ಲ್ಯಾಪ್ ಟಾಪ್ ಹಾಗೂ ಪ್ರೊಜೆಕ್ಟರ್ ಒದಗಿಸಲು ರೂ.2000.00 ಲಕ್ಷಗಳು. |
| | 436 | ನಬಾರ್ಡ್ ಕಾಮಗಾರಿಗಳು | 25000.00 | ನಬಾರ್ಡ್-ಆರ್.ಐ.ಡಿ.ಎಫ್ ಕಾಮಗಾರಿಗಳಿಗಾಗಿ ರೂ.25000.00 ಲಕ್ಷಗಳು. **ಅನುಮೋದಿತ ಹಿಂದಿನ ಸಾಲಿನ ಬಾಕಿ ಕಾಮಗಾರಿಗಳಿಗಾಗಿ ಹಾಗೂ ತುರ್ತು ಕಾಮಗಾರಿಗಳಿಗಾಗಿ (ನ್ಯಾಯಾಲಯ /ಲೋಕಾಯುಕ್ತ/ ಇತರೆ ಪ್ರಕರಣಗಳು) ರೂ.300.00 ಲಕ್ಷಗಳನ್ನು ಮೀಸಲಿರಿಸಿದೆ.** |
| | | ಒಟ್ಟು | 31000.00 | ಪ.ಜಾ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಅನುದಾನವನ್ನು ಮೀಸಲು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಶಾಲೆಗಳು ಮತ್ತು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ದಾಖಲಾತಿ ಶೇ.50 ಕ್ಕಿಂತ ಅಧಿಕವಾಗಿರುವ ಶಾಲೆಗಳ ಕಟ್ಟಡ ನಿರ್ಮಾಣಕ್ಕಾಗಿ ಹಂಚಿಕೆ ಮಾಡುವುದು. |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 22 | 4202-01-201-1-06 | **ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮೂಲಭೂತ ಸೌಕರ್ಯಗಳು** | | |
| | 139 | ಪ್ರಧಾನ ಕಾಮಗಾರಿಗಳು | 1000.00 | ಪ್ರತ್ಯೇಕವಾಗಿ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವುದು. |
| 23 | 4202-01-202-1-05 | **ಪ್ರೌಢ ಶಾಲೆಗಳಿಗೆ ಮತ್ತು ಪದವಿ ಪೂರ್ವ ಕಾಲೇಜುಗಳಿಗೆ ಮೂಲಭೂತ ಸೌಕರ್ಯ** | | |
| | 132 | ಬಂಡವಾಳ ವೆಚ್ಚ | 10.00 | ಸರ್ಕಾರಿ ಶಾಲಾ – ಕಾಲೇಜು ನಿವೇಶನ ಖರೀದಿಗಾಗಿ. |
| | 386 | ನಿರ್ಮಾಣ | 7997.00 | ಕಳೆದ ಮೂರು ವರ್ಷಗಳಲ್ಲಿ ಕೊಠಡಿ/ಕಟ್ಟಡ ನಿರ್ಮಾಣಕ್ಕೆ ಅನುದಾನ ಒದಗಿಸಲಾದ ಶಾಲೆಗಳನ್ನು ಹೊರತುಪಡಿಸಿ ರಾಜ್ಯದ 34 ಜಿಲ್ಲೆಗಳಲ್ಲಿ ಅಗತ್ಯವಿರುವ ಸರ್ಕಾರಿ ಪ್ರೌಢ ಶಾಲೆಗಳ **ಹಾಗೂ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ** ಕಟ್ಟಡ/ಕೊಠಡಿ ಮರು ನಿರ್ಮಾಣ ಮಾಡಲು **ರೂ.7000.00** ಲಕ್ಷಗಳಿಗೆ ಜಿಲ್ಲಾವಾರು/ ತಾಲ್ಲೂಕುವಾರು/ ಶಾಲಾವಾರು-ಕಾಲೇಜುವಾರು ಕ್ರಿಯಾಯೋಜನೆ ಸಿದ್ಧಪಡಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವುದು. |
| | | | | ಕಳೆದ ಎರಡು ಸಾಲಿನಲ್ಲಿ ವಿಶೇಷ ಪ್ಯಾಕೇಜ್‌ರಡಿ ಒದಗಿಸಲಾದ ಅನುದಾನಕ್ಕೆ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರವನ್ನು ಕಡ್ಡಾಯವಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸದರಿ ಯೋಜನೆಯಡಿ ಪ್ರಸಕ್ತ ಸಾಲಿಗೆ ಅಗತ್ಯವಿರುವ ಅನುದಾನದ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.<br>**ಅನುಮೋದಿತ ಹಿಂದಿನ ಸಾಲಿನ ಬಾಕಿ ಕಾಮಗಾರಿಗಳಿಗಾಗಿ ಹಾಗೂ ತುರ್ತು** ಕಾಮಗಾರಿಗಳಿಗಾಗಿ (ನ್ಯಾಯಾಲಯ /ಲೋಕಾಯುಕ್ತ/ ಇತರೆ ಪ್ರಕರಣಗಳು) **ರೂ.997.00** ಲಕ್ಷಗಳನ್ನು ಮೀಸಲಿರಿಸಿದೆ. |
| | 436 | ನಬಾರ್ಡ್ ಕಾಮಗಾರಿಗಳು | 7203.00 | ನಬಾರ್ಡ್ ಸಹಯೋಗದಲ್ಲಿ ಕಟ್ಟಡ ಕಾಮಗಾರಿ ಕೈಗೊಳ್ಳಲು. |
| | | ಒಟ್ಟು | **15210.00** | |
| 24 | 4202-01-202-2-01 | ಸೆಕೆಂಡರಿ-ಯಂತ್ರೋಪಕರಣಗಳು ಮತ್ತು ಪೀಠೋಪಕರಣ | | |
| | 180 | ಯಂತ್ರೋಪಕರಣಗಳು ಮತ್ತು ಸಾಧನ ಸಾಮಾಗ್ರಿ | 5000.00 | TALP ಕಾರ್ಯಕ್ರಮದ ಅಡಿಯಲ್ಲಿ ಸರ್ಕಾರಿ ಶಾಲಾ/ಕಾಲೇಜುಗಳಿಗೆ ಕಂಪ್ಯೂಟರ್/ಲ್ಯಾಪ್ ಟಾಪ್ ಹಾಗೂ ಪ್ರೊಜೆಕ್ಟರ್ ಒದಗಿಸಲು ಪ್ರತ್ಯೇಕವಾಗಿ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವುದು. |

| ಕ್ರ. ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 25 | 2202-02-001-0-09 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | | |
| | 422 | ಪರಿಶಿಷ್ಟಜಾತಿ ಉಪಯೋಜನೆ | 18.00 | ದಿನಾಂಕ:28.05.2020 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಪರಿಷತ್ ನಡಾವಳಿಯಲ್ಲಿ ಅನುಮೋದಿಸಿರುವಂತೆ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಒದಗಿಸಲಾದ ಅನುದಾನವನ್ನು ಪ.ಜಾ/ಪ.ಪಂ ವರ್ಗದ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಬಳಸಲು ಕ್ರಿಯಾ ಯೋಜನೆ ಸಲ್ಲಿಸುವುದು. |
| | 423 | ಗಿರಿಜನ ಉಪಯೋಜನೆ | 12.00 | |
| | | ಒಟ್ಟು | **30.00** | |
| 26 | 4202-01-600-0-04 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | | |
| | 422 | ಪರಿಶಿಷ್ಟಜಾತಿ ಉಪಯೋಜನೆ | 27.00 | ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಅನುದಾನವನ್ನು ಮೀಸಲು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ದುರಸ್ತಿಗಾಗಿ ಜಿಲ್ಲಾವಾರು/ ತಾಲ್ಲೂಕುವಾರು ಮತ್ತು ಶಾಲಾವಾರು ಕ್ರಿಯಾಯೋಜನೆ ಸಿದ್ಧಪಡಿಸಿ ಸರ್ಕಾರದ ಅನುಮೋದನೆ ಪಡೆಯುವುದು. |
| | 423 | ಗಿರಿಜನ ಉಪಯೋಜನೆ | 14.00 | |
| | | ಒಟ್ಟು | **41.00** | |
| | ಸಮಗ್ರ ಶಿಕ್ಷಣ ಅಭಿಯಾನ-ಕರ್ನಾಟಕ (SSK) | | | |
| 27 | 2202-01-113-0-01 | ಸಮಗ್ರ ಶಿಕ್ಷಣ ಅಭಿಯಾನ-ಕರ್ನಾಟಕ | | |
| | 059 | ಇತರೆ ವೆಚ್ಚಗಳು | 17428.00 | ಸರ್ಕಾರಿ ಶಾಲೆಗಳ ಮೂಲಭೂತ ಸೌಲಭ್ಯ ವೆಚ್ಚ ಭರಿಸಲು |
| | 133 | ವಿಶೇಷ ಅಭಿವೃದ್ಧಿ ಯೋಜನೆ (SDP) | 2050.00 | ಹಿಂದುಳಿದ ತಾಲ್ಲೂಕುಗಳಲ್ಲಿನ ಶಾಲೆಗಳ ಮೂಲಭೂತ ಸೌಲಭ್ಯ ವೆಚ್ಚ ಭರಿಸಲು ವಿಶೇಷ ಅಭಿವೃದ್ಧಿ ಕೋಶದ (SDP) ಅನುಮೋದನೆಗಾಗಿ ಕ್ರಿಯಾ ಯೋಜನೆಯನ್ನು ಸಲ್ಲಿಸತಕ್ಕದ್ದು. |
| | 422 | ಪರಿಶಿಷ್ಟಜಾತಿ ಉಪಯೋಜನೆ | 7230.00 | ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪರಿಷತ್ತು ಅನುಮೋದಿಸಿರುವ ಕ್ರಿಯಾಯೋಜನೆ ಅನುಸಾರ ಪ.ಜಾ/ಪ.ಪಂ ಚಟುವಟಿಕೆಗಳಿಗೆ ಬಳಸಲು. |
| | 423 | ಗಿರಿಜನ ಉಪಯೋಜನೆ | 2492.00 | |
| | | ಒಟ್ಟು | **29200.00** | |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 28 | 4202-01-202-1-07 | ಸಮಗ್ರ ಶಿಕ್ಷಣ- ಮೂಲಭೂತ ಸೌಲಭ್ಯ | | |
| | 386 | ನಿರ್ಮಾಣ | 1.00 | ಸಮಗ್ರ ಶಿಕ್ಷಣ ಕರ್ನಾಟಕ ಯೋಜನೆಯಡಿ. ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಲಭ್ಯ ಒದಗಿಸಲು. |
| | ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ | | | |
| 29 | 2202-02-001-0-01 | ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು (ನಿರ್ದೇಶನ ಮತ್ತು ಆಡಳಿತ) | | |
| | 015 | ಪೂರಕ ವೆಚ್ಚಗಳು | 1.00 | ನ್ಯಾಯಾಲಯ ಪ್ರಕರಣಗಳ ನಿರ್ವಹಣೆಗಾಗಿ ನೇಮಿಸಿಕೊಳ್ಳಲಾದ ನಿವೃತ್ತ ನ್ಯಾಯಾಧೀಶರುಗಳಿಗೆ ಸಂಭಾವನೆಯನ್ನು ಪಾವತಿಸಲು. |
| | 051 | ಸಾಮಾನ್ಯ ವೆಚ್ಚ | 120.00 | ಇಲಾಖೆಯ ಕೇಂದ್ರ ಕಚೇರಿ ಮತ್ತು 32 ಜಿಲ್ಲಾ ಉಪನಿರ್ದೇಶಕರ ಕಛೇರಿಗಳಲ್ಲಿನ ಸುಲಲಿತ ಕಾರ್ಯನಿರ್ವಹಣೆಗೆ ಅಗತ್ಯವಿರುವ ಕಛೇರಿ ಸಾದಿಲ್ವಾರು. ಸ್ಟಾಂಪ್ ವೆಚ್ಚ, ಸ್ಟೇಷನರಿ ಖರೀದಿ ವೆಚ್ಚಗಳನ್ನು ಭರಿಸಲು ರೂ.50.00 ಲಕ್ಷಗಳು.<br><br>ನಿರ್ದೇಶನಾಲಯದಲ್ಲಿ ಹಾಗೂ 15 ಜಿಲ್ಲಾ ಉಪನಿರ್ದೇಶಕರ ಕಛೇರಿಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಡಿ.ಇ.ಓ. ಸಿಸ್ಟಮ್ ಅಡ್ಮಿನ್. ಪ್ರೋಗ್ರಾಮರ್. ಗ್ರೂಪ್-ಡಿ ನೌಕರರು. ಸೆಕ್ಯೂರಿಟಿ ಗಾರ್ಡ್ ಗಳು ಹಾಗೂ ಸ್ವಚ್ಛತಗಾರರಿಗೆ ನಿಯಮಾನುಸಾರ ಗೌರವ ಸಂಭಾವನೆ ಪಾವತಿಸಲು ರೂ.65.00 ಲಕ್ಷಗಳು.<br><br>ನಿರ್ದೇಶನಾಲಲಯದ ಕಛೇರಿ ಕಟ್ಟಡ ಕನಿಷ್ಟ ಮಟ್ಟದ ನವೀಕರಣ ವೆಚ್ಚಗಳಿಗಾಗಿ ರೂ.5.00 ಲಕ್ಷಗಳು. |
| | 052 | ದೂರವಾಣಿ ವೆಚ್ಚ | 2.00 | ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ದೂರವಾಣಿ ವೆಚ್ಚ ಭರಿಸಲು. |
| | 053 | ಕಚೇರಿ ಪೀಠೋಪಕರಣಗಳು ಮತ್ತು ಜೋಡಣೆಗಳ ಖರೀದಿ | 5.00 | ಇಲಾಖೆಯ ಕೇಂದ್ರ ಕಚೇರಿ ಮತ್ತು 32 ಜಿಲ್ಲಾ ಉಪನಿರ್ದೇಶಕರ ಕಛೇರಿಗಳಲ್ಲಿನ ಕಚೇರಿ ಪೀಠೋಪಕರಣಗಳ ಖರೀದಿ ಮತ್ತು ಜೋಡಣೆ ವೆಚ್ಚ ಭರಿಸಲು. |
| | 059 | ಇತರೆ ವೆಚ್ಚಗಳು | 200.00 | 1) ನಿರ್ದೇಶನಾಲಯದ 8 ಮತ್ತು 22 ಜಿಲ್ಲಾ ಉಪನಿರ್ದೇಶಕರ ಕಛೇರಿಗಳಲ್ಲಿನ ಹೊರಗುತ್ತಿಗೆ ಆಧಾರದ ಮೇರೆಗೆ ಪಡೆಯಲಾಗುವ ಒಟ್ಟು 30 ವಾಹನಗಳಿಗೆ ಮಾಹೆಸ ರೂ.25,000.00 ರಂತೆ ಬಾಡಿಗೆ ಪಾವತಿಸಲು ರೂ.90.00 ಲಕ್ಷಗಳು.<br><br>2) ವೃತ್ತಿ ಶಿಕ್ಷಣ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಸಿಬ್ಬಂದಿ ವೇತನ ಮತ್ತು ವೃತ್ತಿ ಶಿಕ್ಷಣ ಇಲಾಖೆ ಕಛೇರಿ ಸಾದಿಲ್ವಾರು ವೆಚ್ಚಕ್ಕೆ ರೂ.20.00 ಲಕ್ಷಗಳು. |

| ಕ್ರ.ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | | | | 3) ನಿರ್ದೇಶನಾಲಯದಲ್ಲಿ ಇ-ಆಡಳಿತ ಶಾಖೆಯ ಕನಿಷ್ಠ ಸಾದಿಲ್ವಾರು ವೆಚ್ಚಕ್ಕೆ ರೂ.25.00 ಲಕ್ಷಗಳು.<br>4) ಎನ್.ಸಿ.ಇ.ಆರ್.ಟಿ ವಿಜ್ಞಾನ ವಿಷಯದ ಪಠ್ಯಪುಸ್ತಕಗಳ ಅನುವಾದ, ಪ್ರಶ್ನೆಕೋಠಿ ಪುನರ್ ಪರಿಶೀಲನೆ ಹಾಗೂ ಮೌಲ್ಯಕರಣ ಕಾರ್ಯಕ್ಕಾಗಿ ಹಾಗೂ ಯುವ ಸಂಸತ್ ಅಣಕು ಸ್ಪರ್ಧೆ ಕಾರ್ಯಕ್ರಮ ಮತ್ತು ಕನಿಷ್ಠ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳ ನಿರ್ವಹಣೆಗಾಗಿ ರೂ.65.00 ಲಕ್ಷಗಳು. |
| | 071 | ಕಟ್ಟಡ ವೆಚ್ಚಗಳು | 11.00 | ನಿರ್ದೇಶನಾಲಯದ ಕಟ್ಟಡ ನಿರ್ವಹಣೆ ಹಾಗೂ 9 ಜಿಲ್ಲಾ ಉಪನಿರ್ದೇಶಕರ ಕಛೇರಿಯ ಬಾಡಿಗೆ/ನಿರ್ವಹಣಾ ವೆಚ್ಚಕ್ಕಾಗಿ. |
| | 195 | ಸಾರಿಗೆ ವೆಚ್ಚಗಳು | 15.00 | ನಿರ್ದೇಶನಾಲಯದ 3 ವಾಹನಗಳು ಹಾಗೂ ಜಿಲ್ಲಾ ಉಪನಿರ್ದೇಶಕರ ಕಛೇರಿ 9 ವಾಹನಗಳಿಗೆ ಇಂಧನ ಹಾಗೂ ಇತರೆ ನಿರ್ವಹಣೆಗಾಗಿ. |
| | | ಒಟ್ಟು | **354.00** | |
| 30 | **2202-02-107-3-02** | **ಸರ್ಕಾರಿ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳಿಗೆ ಪರೀಕ್ಷಾ ಶುಲ್ಕಗಳ ಮರುಪಾವತಿ** | | |
| | 103 | ಸಹಾಯಾನುದಾನ – ಸಾಮಾನ್ಯ | 944.00 | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ದಾಖಲಾಗಬಹುದಾದ ಅಂದಾಜು 206840 ವಿದ್ಯಾರ್ಥಿನಿಯರಿಗೆ ತಲಾ ರೂ.456 ರಂತೆ ಸರ್ಕಾರೇತರ ಶುಲ್ಕ ಮರುಪಾವತಿ ವೆಚ್ಚ ಭರಿಸಲು. |
| | | ಒಟ್ಟು | **944.00** | |
| 31 | **2202-02-108-0-01** | ಪದವಿ ಪೂರ್ವ ಪರೀಕ್ಷೆ | | |
| | 015 | ಪೂರಕ ವೆಚ್ಚಗಳು | 2228.00 | ಮೌಲ್ಯಮಾಪನಾ ಕಾರ್ಯನಿರ್ವಹಿಸಿದ ಮುಖ್ಯ /ಉಪಮುಖ್ಯ/ಸಹಾಯಕ ಮೌಲ್ಯಮಾಪಕರುಗಳಿಗೆ, ವಿಶೇಷ ಜಾಗ್ರತದಳ ಸಿಬ್ಬಂದಿಯವರಿಗೆ ಪರಿಷ್ಕೃತ ದರದಲ್ಲಿ ಸಂಭಾವನೆ ಪಾವತಿಸಲು |
| | 041 | ಪ್ರಯಾಣ ವೆಚ್ಚ | 2500.00 | ಮೌಲ್ಯಮಾಪನಾ ಕಾರ್ಯನಿರ್ವಹಿಸಿದ ಮುಖ್ಯ/ಉಪಮುಖ್ಯ/ಸಹಾಯಕ ಮೌಲ್ಯಮಾಪಕರುಗಳಿಗೆ, ವಿಶೇಷ ಜಾಗ್ರತದಳ ಸಿಬ್ಬಂದಿಯವರಿಗೆ ಪ್ರಯಾಣಭತ್ಯೆ ಹಾಗೂ ಪರಿಷ್ಕೃತ ದರದಲ್ಲಿ ದಿನಭತ್ಯೆ ಪಾವತಿಸಲು. |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2019-20ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | 051 | ಸಾಮಾನ್ಯ ವೆಚ್ಚ | 5.00 | ಸರ್ಕಾರದ ಆದೇಶ ಸಂಖ್ಯೆ: ಇಡಿ 117 ಮಾಹಿತಿ 2013, ದಿನಾಂಕ: 06-02-2018 ರನ್ವಯ ಸರ್ಕಾರದಿಂದ ಅನುಮೋದಿತವಾಗಿರುವ ಪದವಿ ಪೂರ್ವ ಶಿಕ್ಷಣ ಪರೀಕ್ಷಾ ಏಕೀಕರಣ ನಿರ್ವಹಣಾ ವ್ಯವಸ್ಥೆ-ಪ್ರಗತಿ-12 ರ ಮುಂದುವರಿಕೆ ಕಾರ್ಯಕ್ರಮವನ್ನು ಇಲಾಖೆಯ ಮೂಲಕ ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಸದರಿ ಕಾರ್ಯಗಳನ್ನು ನಿರ್ವಹಿಸಲು ತಗಲಬಹುದಾದ ವೆಚ್ಚಗಳನ್ನು ಭರಿಸಲು. |
| | 221 | ಸಾಮಾಗ್ರಿ ಮತ್ತು ಸರಬರಾಜು | 2800.00 | 2020ನೇ ಸಾಲಿನ ಮುಖ್ಯ ಹಾಗೂ ಪೂರಕ ದ್ವಿತೀಯ ಪಿ.ಯು.ಸಿ. ಪರೀಕ್ಷೆಗಳ ತಾತ್ವಿಕ/ ಪ್ರಾಯೋಗಿಕ ಪರೀಕ್ಷೆಗಳ ಪರೀಕ್ಷಾ ಕೇಂದ್ರ ಸಾದಿಲ್ವಾರು, ಪರೀಕ್ಷಾ ಕಾರ್ಯಗಳಿಗೆ ಸಂಬಂಧಿಸಿದಂತೆ ಸಾಮಗ್ರಿ ಮತ್ತು ಸರಬರಾಜು ವೆಚ್ಚಗಳು, ಅಧಿಕಾರಿ ಸಿಬ್ಬಂದಿಗಳಿಗೆ ಸಂಭಾವನೆ ಹಾಗೂ ಉತ್ತರ ಪತ್ರಿಕೆ ಹಾಳೆಗಳ ಮುದ್ರಣ ವೆಚ್ಚಗಳು ಹಾಗೂ ಪರೀಕ್ಷೆಗೆ ತಗಲಬಹುದಾದ ರಹಸ್ಯ ವೆಚ್ಚ ಭರಿಸಲು. |
| | 422 | ಪರಿಶಿಷ್ಟಜಾತಿ ಉಪಯೋಜನೆ | 500.00 | ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪರಿಷತ್ತು ಅನುಮೋದಿಸಿರುವ ಕ್ರಿಯಾಯೋಜನೆ ಅನುಸಾರ ಪ.ಜಾ/ಪ.ಪಂ ಚಟುವಟಿಕೆಗಳಿಗೆ ಬಳಸಲು. |
| | 423 | ಗಿರಿಜನ ಉಪಯೋಜನೆ | 133.00 | |
| | | ಒಟ್ಟು | **8166.00** | |
| 32 | **2202-02-109-0-13** | **ಸರ್ಕಾರಿ ಪದವಿ ಪೂರ್ವ ಕಾಲೇಜುಗಳು** | | |
| | 051 | ಸಾಮಾನ್ಯ ವೆಚ್ಚ | 20.00 | ರಾಜ್ಯದ 1232 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿನ ಸಾದಿಲ್ವಾರು ವೆಚ್ಚ ಭರಿಸಲು. |
| | 052 | ದೂರವಾಣಿ ವೆಚ್ಚ | 1.00 | ಕಚೇರಿ ದೂರವಾಣಿ ವೆಚ್ಚಗಳನ್ನು ಭರಿಸಲು. |
| | 071 | ಕಟ್ಟಡ ವೆಚ್ಚಗಳು | 20.00 | ರಾಜ್ಯದ 1232 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿನ ಕಟ್ಟಡ ವೆಚ್ಚ ಭರಿಸಲು. |
| | | ಒಟ್ಟು | **41.00** | |
| | | **ಸಾರ್ವಜನಿಕ ಗ್ರಂಥಾಲಯ ಇಲಾಖೆ** | | |
| 33 | **2205-00-105-0-01** | **ಸಾರ್ವಜನಿಕ ಗ್ರಂಥಾಲಯ-ನಿರ್ದೇಶನ ಮತ್ತು ಆಡಳಿತ** | | |
| | 051 | ಸಾಮಾನ್ಯ ವೆಚ್ಚ | 10.00 | ಕಛೇರಿಯ ಸಾಮಾನ್ಯ ವೆಚ್ಚ, ದೂರವಾಣಿ ವೆಚ್ಚ, ಕಟ್ಟಡ ವೆಚ್ಚ ಹಾಗೂ ಸಾರಿಗೆ ವೆಚ್ಚಗಳನ್ನು ಭರಿಸಲು |
| | 052 | ದೂರವಾಣಿ ವೆಚ್ಚ | 3.00 | |
| | 071 | ಕಟ್ಟಡ ವೆಚ್ಚಗಳು | 35.00 | |
| | 195 | ಸಾರಿಗೆ ವೆಚ್ಚಗಳು | 15.00 | |
| | | ಒಟ್ಟು | 63.00 | |

| ಕ್ರ.ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2020-21ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| 34 | **2205-00-105-0-04** | ಗ್ರಂಥಾಲಯಗಳ ಅಭಿವೃದ್ಧಿ | | |
| | 015 | ಪೂರಕ ವೆಚ್ಚಗಳು | 268.00 | ಗ್ರಾಮ ಪಂಚಾಯತಿ ಗ್ರಂಥಾಲಯ, ಅಲೆಮಾರಿ, ಕೊಳಚೆ ಪ್ರದೇಶ ಮತ್ತು ಮಕ್ಕಳ ಸಮುದಾಯ ಕೇಂದ್ರಗಳ ಮೇಲ್ವಿಚಾರಕರ ಗೌರವ ಸಂಭಾವನೆಗಾಗಿ ಹಾಗೂ 31 ಕನಿಷ್ಠ ದಿನಗೂಲಿ ನೌಕರರ ವೇತನಕ್ಕಾಗಿ. |
| | 051 | ಸಾಮಾನ್ಯ ವೆಚ್ಚಗಳು | 19.00 | ಪುರಸಭೆ, ಪಟ್ಟಣ ಪಂಚಾಯತಿ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುವ 133 ಗ್ರಾಮ ಪಂಚಾಯತಿ ಗ್ರಂಥಾಲಯ, 123 ಅಲೆಮಾರಿ, 94 ಕೊಳಚೆ ಹಾಗೂ 31 ಮಕ್ಕಳ ಸಮುದಾಯ ಕೇಂದ್ರಗಳಿಗೆ ದಿನಪತ್ರಿಕೆ ನಿಯತಕಾಲಿಕೆ ವೆಚ್ಚ ಭರಿಸಲು. |
| | 059 | ಇತರೆ ವೆಚ್ಚಗಳು | 677.00 | 1) ಏಕಗವಾಕ್ಷಿ ಯೋಜನೆಯಡಿಯಲ್ಲಿ 2017ರ ಪ್ರಕಟಿತ ಗ್ರಂಥಗಳ ಖರೀದಿ **ರೂ.300.00 ಲಕ್ಷ**<br>2) ಸರ್ಕಾರದ ಆದೇಶ ಸಂಖ್ಯೆ:ಇಪಿ ಯೋಯೋಕ 2019, ದಿನಾಂಕ:30.05.2019 ರನ್ವಯ ಜಿಲ್ಲಾ/ನಗರ ಗ್ರಂಥಾಲಯಗಳಿಗೆ ಕಟ್ಟಡ ಕಾಮಗಾರಿಗಾಗಿ 3ನೇ ಕಂತಿನ ಅನುದಾನ ಬಿಡುಗಡೆಗಾಗಿ **ರೂ.153.00 ಲಕ್ಷ.** |

| ಕಟ್ಟಡ ಕಾಮಗಾರಿ ವಿವರ | 3ನೇ ಕಂತಿನ ಅನುದಾನ (ರೂ. ಲಕ್ಷಗಳಲ್ಲಿ) |
|---|---|
| ಅಥಣಿ ಶಾಖಾ ಗ್ರಂಥಾಲಯ, ಬೆಳಗಾವಿ ಜಿಲ್ಲೆ | 10.00 |
| ಕೆ. ಆರ್. ನಗರ ಶಾಖಾ ಗ್ರಂಥಾಲಯ, ಮೈಸೂರು ಜಿಲ್ಲೆ | 23.50 |
| ಅಜ್ಜರ ಕಾಡು ಶಾಖಾ ಗ್ರಂಥಾಲಯ, ಉಡುಪಿ ಜಿಲ್ಲೆ. | 100.00 |
| ಕಾರ್ಕಳ ಶಾಖಾ ಗ್ರಂಥಾಲಯ, ಉಡುಪಿ ಜಿಲ್ಲೆ. | 19.50 |
| ಒಟ್ಟು | 153.00 |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2019-20ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | | | | 3) ಡಿಜಿಟಲ್ ಗ್ರಂಥಾಲಯ ನಿರ್ವಹಣೆಗೆ ರೂ.92.32 ಲಕ್ಷಗಳು ಹಾಗೂ ಇ-ಕಂಟೆಂಟ್ ಅಳವಡಿಸಲು ರೂ.50.00 ಲಕ್ಷಗಳು ಒಟ್ಟು ರೂ.146.32 ಲಕ್ಷಗಳು.<br>4) ರಾಜಾರಾಮ್ ಮೋಹನ್‌ರಾಯ್ ಗ್ರಂಥಾಲಯಗಳಿಗೆ ಪುಸ್ತಕಗಳ ಸಾಗಾಣಿಕೆ ವೆಚ್ಚ ರೂ.77.68 ಲಕ್ಷಗಳು. |
| | 103 | ಸಹಾಯಾನುದಾನ – ಸಾಮಾನ್ಯ | 226.00 | ಜಿಲ್ಲಾ ಕೇಂದ್ರ ಗ್ರಂಥಾಲಯಗಳಿಗೆ 2018-19ನೇ ಸಾಲಿನಲ್ಲಿ ಬಾಕಿ ಇರುವ ಭೂ ಕಂದಾಯದ ಮೇಲಿನ ಶೇ.6ರ ಸಹಾಯಾನುದಾನದ ಮೊತ್ತವನ್ನು ಪಾವತಿಸಲು ರೂ.124.78 ಲಕ್ಷಗಳು.<br>ಉಳಿದ ರೂ.101.22 ಲಕ್ಷಗಳನ್ನು ಬೇಡಿಕೆಯನುಸಾರ ಉಳಿದ ಜಿಲ್ಲಾ/ನಗರ ಕೇಂದ್ರ ಗ್ರಂಥಾಲಗಳಿಗೆ ಭೂ ಕಂದಾಯದ ಮೇಲೆ ಶೇ.6 ರ ಸಹಾಯಾನುದಾನ ಅಥವಾ ನಗರ ಸುಂಕ ಪರಿಹಾರ ಧನ ಮೊತ್ತವಾಗಿ ಬಿಡುಗಡೆ ಮಾಡುವುದು. |
| | 422 | ಪರಿಶಿಷ್ಟಜಾತಿ ಉಪಯೋಜನೆ | 409.00 | ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪರಿಷತ್ತು ಅನುಮೋದಿಸಿರುವ ಕ್ರಿಯಾಯೋಜನೆ ಅನುಸಾರ ಪ.ಜಾ/ಪ.ಪಂ ಚಟುವಟಿಕೆಗಳಿಗೆ ಬಳಸಲು. |
| | 423 | ಗಿರಿಜನ ಉಪಯೋಜನೆ | 219.00 | |
| | | ಒಟ್ಟು | **1818.00** | |
| | **ಮುದ್ರಣ, ಲೇಖನ ಸಾಮಾಗ್ರಿ ಮತ್ತು ಪ್ರಕಟಣೆಗಳ ನಿರ್ದೇಶನಾಲಯ** | | | |
| 35 | **2058-00-103-0-01** | ಸರ್ಕಾರಿ ಮುದ್ರಣಾಲಯ | | |
| | 015 | ಪೂರಕ ವೆಚ್ಚಗಳು | 1.00 | ಮಜೂರಿ, ಸಂಭಾವನೆ, ಪಾರಿತೋಷಕ ಮತ್ತು ತರಬೇತಿ ವೆಚ್ಚಗಳನ್ನು ಭರಿಸಲು |
| | 051 | ಸಾಮಾನ್ಯ ವೆಚ್ಚ | 100.00 | ಇಲಾಖೆಗೆ ನಿಗದಿಪಡಿಸಲಾದ ಕಚೇರಿ ಹಣ (Recoupment of Imprest Amount) ಕಾರ್ಖಾನೆ ಲೈಸೆನ್ಸ್ ನೋಂದಣಿ ಮತ್ತು ನವೀಕರಣ ಶುಲ್ಕ, ಆತಿಥ್ಯ ವೆಚ್ಚಗಳು, ಮನರಂಜನೆ ವೆಚ್ಚ, ಕಾರ್ಮಿಕ ಆಯುಕ್ತರು ಹಾಗೂ ಉಪಧನ ನಿಯಂತ್ರಣ ಪ್ರಾಧಿಕಾರಿ ರವರ ಆದೇಶಾನುಸಾರ ವಿತರಿಸುವ ವೆಚ್ಚ. |
| | 052 | ದೂರವಾಣಿ ವೆಚ್ಚ | 5.00 | ಇಲಾಖೆಯ ಕೇಂದ್ರ ಹಾಗೂ ಎಲ್ಲಾ ಅಧೀನ ಕಚೇರಿಗಳಿಗೆ ಅಂತರ್ಜಾಲ ಮತ್ತು ದೂರವಾಣಿ ವೆಚ್ಚ. |

| ಕ್ರ ಸಂ | ಲೆಕ್ಕ ಶೀರ್ಷಿಕೆ/ ಉಪ ಶೀರ್ಷಿಕೆ | ಕಾರ್ಯಕ್ರಮದ ಹೆಸರು | 2019-20ರ ಆಯವ್ಯಯ ಅಂದಾಜು (ರೂ.ಲಕ್ಷಗಳಲ್ಲಿ) | ಕಾರ್ಯಕ್ರಮ ಅನುಷ್ಠಾನದ ವಿವರಗಳು |
|---|---|---|---|---|
| | 071 | ಕಟ್ಟಡ ವೆಚ್ಚಗಳು | 400.00 | ಕೇಂದ್ರ ಕಛೇರಿ ಹಾಗೂ ಅಧೀನ ಕಛೇರಿಗಳ ಸಿವಿಲ್ ಮತ್ತು ಎಲೆಕ್ಟ್ರಿಕಲ್ ವೆಚ್ಚಗಳಿಗಾಗಿ. |
| | 180 | ಯಂತ್ರೋಪಕರಣಗಳು ಮತ್ತು ಸಾಧನ ಸಾಮಾಗ್ರಿ | 250.00 | ಯಂತ್ರೋಪಕರಣಗಳು ಹಾಗೂ ಸಾಧನ ಸಾಮಾಗ್ರಿಗಳ ಖರೀದಿ ವೆಚ್ಚ ಭರಿಸಲು ವಿಸ್ತೃತವಾದ ಕ್ರಿಯಾ ಯೋಜನೆ ಸಲ್ಲಿಸುವುದು. |
| | 195 | ಸಾರಿಗೆ ವೆಚ್ಚಗಳು | 9.00 | ಕೇಂದ್ರ ಕಛೇರಿ ಹಾಗೂ ಅಧೀನ ಕಛೇರಿಗಳ ಸಾರಿಗೆ ವೆಚ್ಚಕ್ಕಾಗಿ. |
| | 221 | ಸಾಮಾಗ್ರಿ ಮತ್ತು ಸರಬರಾಜು | 2500.00 | ಉಪಕರಣ ಮತ್ತು ಸಮವಸ್ತ್ರ, ಮುದ್ರಣ. ಲೇಖನ ಮತ್ತು ಸರಬರಾಜು ಖರೀದಿ ವೆಚ್ಚಗಳನ್ನು ಭರಿಸಲು |
| | | ಒಟ್ಟು | 3265.00 | |
| 36 | 2058-00-104-0-00 | ಇತರೆ ಮೂಲಗಳಿಂದ ಮಾಡಿಸಿಕೊಂಡ ಮುದ್ರಣ ಕೆಲಸದ ವೆಚ್ಚ | | |
| | 051 | ಸಾಮಾನ್ಯ ವೆಚ್ಚ | 500.00 | ಮುದ್ರಣ. ಲೇಖನ ಸಾಮಾಗ್ರಿ ಮತ್ತು ಪ್ರಕಟಣೆಗಳ ನಿರ್ದೇಶನಾಲಯವು ಇತರೆ ಮೂಲಕಗಳಿಂದ ಮಾಡಿಸಿಕೊಂಡಿರುವ ಮುದ್ರಣ ವೆಚ್ಚ ಭರಿಸಲು. |
| | ಒಟ್ಟು ಮೊತ್ತ | | 203215.00 | |

18.06.2020

(ಎಸ್.ಆರ್.ಎಸ್.ನಾಥನ್)
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

18/06

ಸರ್ಕಾರದ ಆದೇಶ ಸಂಖ್ಯೆ: ಇಪಿ 113 ಯೋಸೆಕ 2020 (ಭಾಗ-1), ದಿನಾಂಕ: 13.07.2020 ಅನುಬಂಧ-2

ಲೆ. ಶೀ. 2205-00-105-0-04-423 (ಗಿರಿಜನ ಉಪಯೋಜನೆ)

(ರೂ. ಲಕ್ಷಗಳಲ್ಲಿ)

| ಕ್ರ ಸಂ | ಲೆಕ್ಕ ಶೀರ್ಷಿಕೆ ವಿವರ | 2020-21ನೇ ಸಾಲಿನ ಆಯವ್ಯಯದಲ್ಲಿ ಹಂಚಿಕೆ ಮಾಡಲಾದ ಅನುದಾನ | ಉದ್ದೇಶಿಸಲಾದ ಕಾರ್ಯಕ್ರಮದ ವಿವರ | ಹಂಚಿಕೆ ಮಾಡಲಾದ ಅನುದಾನ |
|---|---|---|---|---|
| 01 | 2205-00-105-0-04-423 ಗಿರಿಜನ ಉಪಯೋಜನೆ | ರೂ.219.00 | ರೂ.30.00 ಲಕ್ಷಗಳ ಮಿತಿಯಲ್ಲಿ ಮೀಸಲು ವಿಧಾನ ಸಭಾಕ್ಷೇತ್ರ ವ್ಯಾಪ್ತಿಯಲ್ಲಿ ಬರುವ 01 ತಾಲ್ಲೂಕು ಗ್ರಂಥಾಲಯ ಹಾಗೂ ರೂ.15.00 ಲಕ್ಷಗಳ ವೆಚ್ಚದಲ್ಲಿ 01 ಅಲೆಮಾರಿ ಗ್ರಂಥಾಲಯ ಕಟ್ಟಡ ನಿರ್ಮಾಣ. | ಕ್ರಸಂ / ಕಾಮಗಾರಿ ವಿವರ / ಅಂದಾಜು ಮೊತ್ತ<br>01 / ಲಿಂಗಸೂಗೂರು ಮೀಸಲು ವಿಧಾನಸಭಾಕ್ಷೇತ್ರಚಿತ್ತಾಪುರದಅಲೆಮಾರಿಗ್ರಂಥಾಲಯಕಟ್ಟಡ ನಿರ್ಮಾಣ / 15.00<br>02 / ಶಿರಹಟ್ಟಿ ಮೀಸಲು ವಿಧಾನಸಭಾಕ್ಷೇತ್ರಲಕ್ಷ್ಮೇಶ್ವರ ತಾಲ್ಲೂಕು ಗ್ರಂಥಾಲಯಕಟ್ಟಡ ನಿರ್ಮಾಣ / 30.00<br>ಒಟ್ಟು / 45.00 |
| | | | 2020ನೇ ಸಾಲಿನಲ್ಲಿ ಪ್ರಥಮವಾಗಿ ಮುದ್ರಣಗೊಂಡು ಪ್ರಕಟಣೆಯಾದ ಸಾಹಿತ್ಯ, ಸ್ಪರ್ಧಾತ್ಮಕ, ಪರಾಮರ್ಶನ, ಕಾನೂನು, ವಿಶ್ವ ಕೋಶಗಳು, ಪುಸ್ತಕಗಳನ್ನು 51 ಮೀಸಲು ವಿಧಾನಸಭಾಕ್ಷೇತ್ರ ವ್ಯಾಪ್ತಿಯ ತಾಲ್ಲೂಕು ಗ್ರಂಥಾಲಯಗಳಿಗೆ ಸರಬರಾಜು. | 144.00 |
| | | | 51 ವಿಧಾನ ಸಭಾಕ್ಷೇತ್ರ ವ್ಯಾಪ್ತಿಯಲ್ಲಿ ಬರುವತಾಲ್ಲೂಕ್ ಗ್ರಂಥಾಲಯಗಳಿಗೆ ಅಗತ್ಯವಿರುವಓದುವ ಮೇಜು ಮತ್ತುಕುಷನ್ ಕುರ್ಚಿಗಳ ಸರಬರಾಜು. | 30.00 |
| | ಒಟ್ಟು | | | 219.00 |

ಶ್ರೀ ಎಸ್.ಆರ್.ಎಸ್. ನಾಧನ್
ವಿಶೇಷಾಧಿಕಾರಿ, ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

ಅನುಬಂಧ-1

ಸರ್ಕಾರದ ಆದೇಶ ಸಂಖ್ಯೆ:ಇಪಿ 113 ಯೋಸಕ 2020(ಭಾಗ-1), ದಿನಾಂಕ:13.07.2020

ಲೆ.ಶೀ.2205-00-105-0-04-422 (ಪರಿಶಿಷ್ಟ ಜಾತಿಉಪಯೋಜನೆ)

(ರೂ ಲಕ್ಷಗಳಲ್ಲಿ)

| ಕ್ರ ಸಂ | ಲೆಕ್ಕ ಶೀರ್ಷಿಕೆ ವಿವರ | 2020-21ನೇ ಸಾಲಿನ ಆಯವ್ಯಯದಲ್ಲಿ ಹಂಚಿಕೆ ಮಾಡಲಾದ ಅನುದಾನ | ಉದ್ದೇಶಿಸಲಾದ ಕಾರ್ಯಕ್ರಮದ ವಿವರ | ಹಂಚಿಕೆ ಮಾಡಲಾದ ಅನುದಾನ |
|---|---|---|---|---|
| 01 | 2205-00-105-0-04-422 ಪರಿಶಿಷ್ಟ ಜಾತಿ ಉಪ ಯೋಜನೆ | 409.00 | ರೂ.30.00 ಲಕ್ಷಗಳ ಮಿತಿಯಲ್ಲಿ ಮೀಸಲು ವಿಧಾನ ಸಭಾಕ್ಷೇತ್ರ ವ್ಯಾಪ್ತಿಯಲ್ಲಿ ಬರುವ 03 ತಾಲ್ಲೂಕು ಗ್ರಂಥಾಲಯಗಳ ಕಟ್ಟಡ ನಿರ್ಮಾಣ. | |
| | | | 2020ನೇ ಸಾಲಿನಲ್ಲಿ ಪ್ರಥಮವಾಗಿ ಮುದ್ರಣಗೊಂಡು ಪ್ರಕಟಣೆಯಾದ ಸಾಹಿತ್ಯ, ಸ್ಪರ್ಧಾತ್ಮಕ, ಪರಾಮರ್ಶನ, ಕಾನೂನು, ವಿಶ್ವ ಕೋಶಗಳು, ಪುಸ್ತಕಗಳನ್ನು 51 ಮೀಸಲು ವಿಧಾನಸಭಾಕ್ಷೇತ್ರ ವ್ಯಾಪ್ತಿಯ ತಾಲ್ಲೂಕು ಗ್ರಂಥಾಲಯಗಳಿಗೆ ಸರಬರಾಜು. | 264.00 |
| | | | 51 ವಿಧಾನ ಸಭಾಕ್ಷೇತ್ರ ವ್ಯಾಪ್ತಿಯಲ್ಲಿ ಬರುವತಾಲ್ಲೂಕ್ ಗ್ರಂಥಾಲಯಗಳಿಗೆ ಅಗತ್ಯವಿರುವ ಮೇಜು ಮತ್ತುಕುರ್ಚಿಗಳ ಸರಬರಾಜು ಮಾಡಲು | 55.00 |
| | ಒಟ್ಟು | | | 409.00 |

| ಕ್ರ ಸಂ | ಕಾಮಗಾರಿ ವಿವರ | ಅಂದಾಜು ಮೊತ್ತ |
|---|---|---|
| 01 | ಮುಧೋಳ ಮೀಸಲು ವಿಧಾನಸಭಾಕ್ಷೇತ್ರ ಮುಧೋಳ ಶಾಖಾ ಗ್ರಂಥಾಲಯಕಟ್ಟಡ ನಿರ್ಮಾಣ | 30.00 |
| 02 | ಟಿ.ನರಸೀಪುರ ಮೀಸಲು ವಿಧಾನಸಭಾಕ್ಷೇತ್ರ ಬನ್ನೂರು ಶಾಖಾ ಗ್ರಂಥಾಲಯಕಟ್ಟಡ ನಿರ್ಮಾಣ | 30.00 |
| 03 | ಮಳವಳ್ಳಿ ಮೀಸಲು ವಿಧಾನಸಭಾಕ್ಷೇತ್ರ ಮಳವಳ್ಳಿ ಟೌನ್ ಶಾಖಾ ಗ್ರಂಥಾಲಯಕಟ್ಟಡ ನಿರ್ಮಾಣ | 30.00 |
| | ಒಟ್ಟು | 90.00 |

ಶ್ರೀ ಎಸ್.ಆರ್.ಎಸ್. ನಾಧನ್
ವಿಶೇಷಾಧಿಕಾರಿ, ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ